# ಸಿದ್ಧಗಂಗಾ



ಏಪ್ರಿಲ್ ೧೯೭೭

# ನಿಮಗೆ ಯಾವುದು ಸೂಕ್ತ ? ಆಯ್ದುಕೊಳ್ಳಿ ! ಆರಂಭಿಸಿರಿ !!

ಸುಪ್ರಸಿದ್ಧ ಸುಕ್ಷೇತ್ರ ಸಿದ್ಧಗಂಗಾ. ಇಲ್ಲಿ ಎಡಬಿಡದೆ ನಡೆಯುತ್ತಿರುವ ತ್ರಿವಿಧ ದಾಸೋಹಗಳು ಎಲ್ಲೆಲ್ಲೂ ಜನಜನಿತ. ಸುಮಾರು ದಶಕಗಳ ಸಾರ್ವಜನಿಕ ಸೇವೆ ಎಲ್ಲರನ್ನೂ ಆಕರ್ಷಿಸಿದೆ. ಅವರ ಮೆಚ್ಚಿಗೆಯನ್ನು ಪಡೆದಿದೆ.

ಮೆಚ್ಚಿದ ಮಹನೀಯರು ನಿಂತು ಬೆಂಬಲಿಸುತ್ತಿದ್ದಾರೆ. ಕೊಡುಗೈ ದೊರೆಗಳಾಗಿ ನೀಡುತ್ತಿದ್ದಾರೆ. ಅನೇಕರು ಅನೇಕ ವಿಧಗಳಲ್ಲಿ ಈ ಬೃಹತ್ಪ್ರಮಾಣದ ಮಹತ್ಕಾರ್ಯಕ್ಕೆ ನೆರವಾಗುತ್ತಿದ್ದಾರೆ. " **ಸಾರ್ವಜನಿಕರ ನೆರವೇ ಸಂಸ್ಥೆಯ ಮಹಾನಿಧಿ** " ಎಂಬುದಾಗಿ ಶ್ರೀ ಶ್ರೀ **ಗಳವರೇ** ಸಾರಿ ಸಾರಿ ಹೇಳಿದ್ದಾರೆ. ದಾನಿಗಳ ದಾನಪವಿತ್ರ ಪಾತ್ರತ್ವವನ್ನು ಇಲ್ಲಿ ಹೊಂದುತ್ತದೆ. ಈ **ಮಹಾಶಯರುಗಳಿಗೆ 'ಸಿದ್ಧಗಂಗಾ'** ತುಂಬು ಹೃದಯದ ಧನ್ಯವಾದಗಳನ್ನು ಅರ್ಪಿಸುತ್ತದೆ

**ಧಾನ್ಯ ಸಂಗ್ರಹಣೆ:**

ಪ್ರತಿವರ್ಷ ಸುಗ್ಗಿಯಲ್ಲಿ ಇಂತಿಷ್ಟು ಧಾನ್ಯ ಮುಡುಪಾಗಿಡಿ.

ನೀವು ಬಂದಾಗ ತಂದು ಅರ್ಪಿಸಿರಿ, ಅಥವಾ ಕ್ಷೇತ್ರದ ಪ್ರತಿನಿಧಿಗಳು ಬಂದಾಗ ಒಪ್ಪಿಸಿರಿ.

ನೀವು ನೀಡಿದ ತೆನೆಗಳು ಕೂಡಿ ರಾಶಿಯಾಗಿ ದಾಸೋಹಕ್ಕೆ ವಿನಿಯೋಗವಾಗಲಿ.

**ಧನ ಸಹಾಯ:**

ಪ್ರತಿ ತಿಂಗಳೂ ಯಥಾಶಕ್ತಿ ನಿಮ್ಮ ಕಾಣಿಕೆ ಕಳಿಸಿರಿ.

ನಿಮ್ಮ ಖಾತೆ ಇರುವ ಬ್ಯಾಂಕಿನಲ್ಲಿ ಶ್ರೀ ಕ್ಷೇತ್ರದ ಖಾತೆ ಇರುತ್ತೆ.

ಪ್ರತಿ ತಿಂಗಳೂ ನಿಮ್ಮ ಖಾತೆಯಿಂದ ಶ್ರೀ ಗಳವರ ಖಾತೆಗೆ ವರ್ಗಾಯಿಸಲು ಬ್ಯಾಂಕ್ ಮೇನೇಜರ್ ರವರಿಗೆ ಒಂದು ಪತ್ರ ಬರೆಯಿರಿ.

ನಿಮಗೆ ಶ್ರಮವಿಲ್ಲದೆ ನಿಮ್ಮ ಕಾಣಿಕೆ ಸಂದಾಯವಾಗುತ್ತದೆ.

ವರ್ಷಕ್ಕೊಮ್ಮೆ ನಿಮ್ಮಿಂದ ಸಂದಾಯವಾದ ಒಟ್ಟು ಕಾಣಿಕೆಯ ಬಗ್ಗೆ ಪತ್ರ ಬರುತ್ತೆ.

**ಕೂಡಿಟ್ಟು ಕಳುಹಿಸಿರಿ:**

ಒಂದೇ ಬಾರಿಗೆ ಇಂತಿಷ್ಟೆಂದು ದಾನನೀಡುವುದು ಹಲವರಿಗೆ ಅಸಾಧ್ಯ.

ಹಾಗಿದ್ದಲ್ಲಿ ಶ್ರೀ ಕ್ಷೇತ್ರದ ಒಂದು ಹುಂಡಿಯನ್ನು ನಿಮ್ಮ ಮನೆಯಲ್ಲಿಡಿರಿ,

ನಿತ್ಯ ಎಷ್ಟು ಸಾಧ್ಯವೋ ಅಷ್ಟನ್ನು ಹಾಕಿ ವರ್ಷಕ್ಕೊಮ್ಮೆ ಶ್ರೀ ಮಠಕ್ಕೆ ಕಳಿಸಿರಿ.

ಯಾವುದೇ ಹಣ ಕಳಿಸುವವರು, ಎಂ. ಒ. ಬ್ಯಾಂಕ್ ಡ್ರಾಫ್ಟ್ ಆರ್ಡರುಗಳನ್ನು ಶ್ರೀ ಶ್ರೀ **ಶಿವಕುಮಾರಸ್ವಾಮಿಗಳು,** ಶ್ರೀ ಸಿದ್ಧಗಂಗಾಮಠ, ತುಮಕೂರುಜಿಲ್ಲಾ –572131 ಇವರಿಗೆ ನೇರವಾಗಿ ಕಳುಹಿಸಬೇಕು.

ಸಹಸ್ರಾರು ಬಡಮಕ್ಕಳ ಆಶ್ರಯ ಕೇಂದ್ರ " **ಶ್ರೀ ಸಿದ್ಧಗಂಗಾ** " ಇಲ್ಲಿಗೆ ನೀಡಿದ ಉದಾರ ಹೃದಯದ ನಿಮ್ಮ ದಾನ ನಿತ್ಯದಾಸೋಹಕ್ಕೆ ವಿನಿಯೋಗವಾಗುತ್ತದೆ. ನೀಡಿರಿ ನಿತ್ಯಸಂತೋಷವನ್ನು ಹೊಂದಿರಿ.

**ಭಕ್ತ ಮಂಡಲಿ**

ಶ್ರೀ ಸಿದ್ಧಗಂಗಾ ಕ್ಷೇತ್ರ



# ಶ್ರೀವಾಣಿ

ಸ್ವಾತಂತ್ರ್ಯ ಸಮರ ಕಾಲದಲ್ಲಿ ವ್ಯಕ್ತಗೊಂಡ ತ್ಯಾಗ ಬುದ್ಧಿ ಸ್ವಾತಂತ್ರ್ಯ ಪ್ರಾಪ್ತಿಯ ನಂತರದ ಅವಧಿಯಲ್ಲಿ ಅದೃಶ್ಯವಾದುದು ಶೋಚನೀಯವಾದ ವಿಷಯ. ಈಗ ತ್ಯಾಗದ ಸ್ಥಾನದಲ್ಲಿ ಸ್ವಾರ್ಥ ತಲೆಹಾಕಿದೆ. ಮೂರು ಬೃಹತ್ ಯೋಜನೆಗಳು ಮುಗಿದಿದ್ದರೂ ಕೆಲವೇ ಮಂದಿ ಶ್ರೀಮಂತರಾದರು; ಶ್ರೀಮಂತರಾಗಿದ್ದವರು ಮತ್ತಷ್ಟು ಶ್ರೀಮಂತರಾದರು. ಇದು ತ್ಯಾಗದ ಅಭಾವದ ಸಂಕೇತವೇ ಸರಿ. ದೇಶದ ಪುರೋಭಿವೃದ್ಧಿಗೆ, ಸುಖೀ ರಾಜ್ಯ ಸ್ಥಾಪನೆಗೆ ತ್ಯಾಗವೇ ತಳಹದಿ. ತ್ಯಾಗಕ್ಕೆ ಸರ್ವರೂ ಸಿದ್ಧರಾಗಬೇಕು. ಭೋಗಮಯ ಜೀವನದ ಲಾಲಸೆ ಜನತೆಯಲ್ಲಿ ಕಡಿಮೆಯಾಗಬೇಕು. ಸ್ವಹಿತಕ್ಕಿಂತ ದೇಶದ ಹಿತ ಮುಖ್ಯವೆಂಬ ಭಾವನೆ ಮೂಡಿ ಬರಬೇಕು. ದೇಶಸೇವೆಯ ನೆಪದಲ್ಲಿ ಸ್ವಾರ್ಥ ಸಾಧನೆಯ ಗುರಿ ಹೊಂದಿರುವ ಮಂದಿ ಇಂದು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಪ್ರಬುದ್ಧಮಾನಕ್ಕೆ ಬರುತ್ತಿರುವುದು ಅಶುಭಕರ ಸಂಕೇತ. ಇದರ ವಿರುದ್ಧ ಹೋರಾಟ ಅನಿವಾರ್ಯವೆನಿಸಿದೆ. ಜನತೆ ನಿಸ್ಪೃಹ ದೇಶಸೇವಕರನ್ನು ಗುರುತಿಸಿ ದೇಶಸೇವೆಯ ಗುರುತರ ಹೊಣೆಯನ್ನು ಅವರ ಹೆಗಲಿಗೇರಿಸುವ ಹಂಬಲ ಹೊಂದಿರುವುದು ಒಂದು ಮಹತ್ತರ ಅಂಶವಾಗಿದೆ. ತನ್ನ ಭವಿಷ್ಯ ಉಜ್ವಲವಾಗ ಬೇಕಾದರೆ ಯಾವ ಮಾರ್ಗದಲ್ಲಿ ಮುನ್ನಡೆಯಬೇಕೆಂಬುದನ್ನು ಜನತೆ ಕುರಿತು ಯೋಚಿಸುವ ಸಂಧಿಕಾಲ ಇಂದು ಬಂದಿದೆ. ಜನತೆ ಈಗ ಎಚ್ಚರ ತಪ್ಪಿ ನಡೆದರೆ ದುರ್ದಿನಗಳ ಕಹಿ ಕಟ್ಟಿಟ್ಟ ಬುತ್ತಿ. ಇಂದು ಸರ್ವಾಧಿಕಾರ ಎಲ್ಲೆಲ್ಲೂ ಕುಡಿಯೊಡೆಯ ತೊಡಗಿದೆ. ಹಿಂದಿನ ಕಾಲದಲ್ಲಿ ಕಿರೀಟದ ಹೆಸರಿನಲ್ಲಿ ನಡೆಯುತ್ತಿದ್ದ ದಬ್ಬಾಳಿಕೆಗೆ ತುತ್ತಾಗಿ ಜನತೆ ನೊಂದು ಬೆಂದರೆ, ಇಂದು ತತ್ವಗಳ, ಗುಂಪಿನ, ಪಂಗಡಗಳ, ಜಾತಿಮತಗಳ, ಆದರ್ಶದ ಉರುಳಿನಲ್ಲಿ ಸಿಲುಕಿ ಪ್ರಾಣಗತವಾಗಿ ಉಸಿರುಕಟ್ಟಿ ಒದ್ದಾಡುತ್ತಿದೆ. ಸರ್ವಾಧಿಕಾರ ಜನತೆಯ ಸೇವೆಯ ಸೋಗಿನಲ್ಲಿ ವಿಶ್ವವ್ಯಾಪಿಯಾಗಿ ತಾನೇ ತಾನಾಗಿ ಮೆರೆಯುತ್ತಿದೆ. ಸರ್ವಾಧಿಕಾರದ ಹುಟ್ಟಡಗಿಸಿ ಸ್ವಾತಂತ್ರ್ಯದ ನೈಜ ಸವಿಯನ್ನು ಪಡೆಯಲು ಜನತೆ ತನ್ನ ಬುದ್ಧಿ ಮನಸ್ಸುಗಳ ಮೊರೆ ಹೋಗಬೇಕಾಗಿದೆ.

# 'ಸಿದ್ಧಗಂಗಾ'

ಏಪ್ರಿಲ್, ೧೯೭೭

ಸಂಪುಟ–೧೩ ಸಂಚಿಕೆ–೪

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕರು
ಪಂ|| ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ: 10 ರೂ
ಆಜೀವ ಸದಸ್ಯತ್ವ: 101 ರೂ


## ಈ ಸಂಚಿಕೆಯಲ್ಲಿ



ಮುಖ ಪುಟ

ಕಾಯಕವೇ ಕೈಲಾಸವೆಂಬ ತತ್ವವೇ
ಮೈವೆತ್ತು ಬಂದ ಜಗದೋದ್ಧಾರಕ

### ಓದುಗರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು ಸಣ್ಣಕಥೆ, ಕವನ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗ್ಗಿಂದಾಗ್ಗೆ ನಿಗದಿಪಡಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"
'ಸಿದ್ಧಗಂಗಾ' [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ –572131 ತುಮಕೂರು ಜಿಲ್ಲೆ

ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ನಿಮ್ಮ ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ವಿಳಾಸದ ಹಿಂಬದಿ ಇರುವ ಕ್ರಮಾಂಕ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ಪತ್ರ ಬರೆಯಿರಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ನೂತನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ವಿನಂತಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಪ್ರಕಾಶಕರು
**'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾಮಠ–572131, ತುಮಕೂರು ಜಿಲ್ಲೆ**

# ನವನೀತ

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

**ಅಜಾತ ಮೃತ ಮೂರ್ಖಾಣಾಂ ವರಮಾದ್ಯೌನ ಚಾಂತಿಮಃ ।**
**ಸಕೃದ್ದುಃಖಕರಾವಾದ್ಯಾವಂತಿಮಸ್ತು ಪದೇ ಪದೇ ॥**

ಹುಟ್ಟದಿರುವವ, ಸತ್ತವನು ಮತ್ತೆ ಮೂರ್ಖ,
ಇವರೊಳಬ್ಬರು ಮೊದಲಿಗರು ಮಾತ್ರ ಶ್ರೇಷ್ಠ.
ನೆನೆದಾಗ ದುಃಖಕ್ಕೆ ಕಾರಣರು ಇವರು.
ಕೊನೆಯವನೊ ಅನುದಿನವು ದುಃಖಕ್ಕೆ ತವರು.



**ವರಮೇಕೋ ಗುಣೀ ಪುತ್ರೋ ನ ಚ ಮೂರ್ಖಶತಾನ್ಯಪಿ ।**
**ಏಕಶ್ಚಂದ್ರಸ್ತಮೋ ಹಂತಿ ನ ಚ ತಾರಾಗಣೋಽಪಿ ಚ ॥**

ಮತಿಹೀನ ಸುತರಿರಲು ಶತಸಂಖ್ಯೆಗಿಂತ
ಸುತನೊಬ್ಬನೇ ಲೇಸು ತಾ ಸುಗುಣವಂತ.
ತಮ ಕಳೆವನೊಬ್ಬನೇ ಹಿಮಕರನು ತಾನು.
ಲಕ್ಷ ನಕ್ಷತ್ರಗಳಲ್ಲ ತಿಳಿಯೆಯೇನು ?



**ಸ ಜಾತೋ ಯೇನ ಜಾತೇನ ಯಾತಿ ವಂಶಃ ಸಮುನ್ನತಿಮ್ ।**
**ಪರಿವರ್ತಿನಿ ಸಂಸಾರೇ ಮೃತಃ ಕೋವಾನ ಜಾಯತೇ ?॥**

ಯಾರ ಜನನವು ವಂಶದುನ್ನತಿಗೆ ಕಾರಣವೊ
ಅಂಥವನ ಜನನವೇ ಜನನ ಕಾಣೊ.
ಹುಟ್ಟು-ಸಾವಿನ ಚಕ್ರದೀ ಧರೆಯ ಮೇಲೆ
ಹುಟ್ಟದಿರುವನಾರು ಸತ್ತ ಮೇಲೆ ?

—'ಕಾವ್ಯಸುಧಾಪ್ರಿಯ'

# ಅಮೃತ ಬಿಂದು

'ಧರ್ಮ' ಎಂದರೇನು? ಆಚರಿಸಲು ಯೋಗ್ಯವಾದದ್ದು ಎನ್ನಬಹುದೆ? ಹಾಗೆನ್ನುವುದಾದರೆ ಆಚರಿಸಲು ನಿಷಿದ್ಧವಾದುದು ಅಧರ್ಮವೆನ್ನಿಸಿಕೊಳ್ಳುತ್ತದೆ. ಧರ್ಮದ ಅರ್ಥ ಮತ್ತು ಪರಿಭಾಷೆ ಸೀಮಿತ ಅಥವಾ ಸಂಕೀರ್ಣವಾದುದಲ್ಲವೆಂಬುದಂತೂ ಖಚಿತ. ಅದರ ಅರ್ಥ ವೈಶಾಲ್ಯಕ್ಕೆ ಹಲವಾರು ಆಡುನುಡಿಗಳ ಸಮರ್ಥನೆ ಸಿಕ್ಕುತ್ತದೆ. 'ಧರ್ಮೋ ರಕ್ಷತಿ ರಕ್ಷಿತಃ' ಈ ದೇವವಾಣಿಹೇಳುವುದಾದರೂ ಏನನ್ನು? 'ರಕ್ಷಿಸಲ್ಪಟ್ಟ ಧರ್ಮವು ತನನ್ನು ರಕ್ಷಿಸಿದವನನ್ನು ರಕ್ಷಿಸುತ್ತದೆ' ಎಂದ ಮೇಲೆ ಮಾನವ, ತಾನು ಉಳಿಯಬೇಕಾದರೆ ಧರ್ಮವನ್ನು ಉಳಿಸುವುದು ಅನಿವಾರ್ಯ ಎಂಬುದನ್ನು ತಳ್ಳಿಹಾಕುವಂತಿಲ್ಲ. ತಿರಿದುಣ್ಣುವ ಹರಕು ಬಟ್ಟೆಯ ಮುದುಕ ಮನೆಯ ಮುಂದೆ ನಿಂತು 'ಧರ್ಮ ತಾಯಿ' ಎಂದು ಆರ್ತಧ್ವನಿಯಲ್ಲಿ ಬೇಡುವುದರ ಹಿಂದೆ ಅಡಗಿರುವ ರಹಸ್ಯವೇನು? 'ಹಸಿದ ಹೊಟ್ಟೆಗೆ ಒಂದು ತುಣುಕು ರೊಟ್ಟಿ ಕೊಡಿ' ಎಂಬುದನ್ನು ಮಾತ್ರ ಧ್ವನಿಸುವಂತಿದ್ದರೆ ಆಲೋಚಿಸಬೇಕಾದ್ದೇನೂ ಇಲ್ಲವೆಂದೇ ತೋರುತ್ತದೆ. 'ನಿಮ್ಮ ಧರ್ಮವನ್ನು ಉಳಿಸಿಕೊಳ್ಳಲು (ಗಳಿಸಿಕೊಳ್ಳಲು) ಒಂದು ಸದವಕಾಶ ನಿಮಗಿದೆ' ಎಂಬ ಎಚ್ಚರಿಕೆ ನೀಡುವ ಅರ್ಥ ಅಡಗಿದೆ ಎಂದು ಭಾವಿಸಿದರೆ ಎಚ್ಚರಿಕೆ ನೀಡಲು ಅವನೆಷ್ಟರವನು? ಎಂಬ ಪ್ರಶ್ನೆ ಸಹಜವಾಗಿ ಮೂಡುತ್ತದೆ. ಧರ್ಮವನ್ನು ರಕ್ಷಿಸಿಕೊಳ್ಳುವಲ್ಲಿ ಸಹಕರಿಸುವ ಯಾವನೇ ಆಗಲಿ, ಅವನು ಭಿಕಾರಿಯೇ ಆದರೂ ದೈವಸ್ವರೂಪನೆಂದು ಭಾವಿಸುವುದು ತಪ್ಪಾಗುವುದಿಲ್ಲ. ಅಲ್ಲದೆ ಧರ್ಮಕ್ಕೆ ಸದಾ ಗೆಲುವೇ! ಅದು ಎಂದಿಗೂ ಸೋಲನ್ನರಿಯದೆಂಬುದನ್ನು ಒಪ್ಪಲೇಬೇಕಲ್ಲವೆ? **'ದುಂಬಿ'**

# ಜಗಜ್ಯೋತಿ ಬಸವಣ್ಣನವರು

(ಬಾಲಲೀಲಾ ಮಹಾಂತ ಶಿವಯೋಗಿಗಳ ದೃಷ್ಟಿಯಲ್ಲಿ)

—ಎಸ್. ಎಸ್. ಭೂಸರಡ್ಡಿ

ಮಾನವ ಜೀವನ ಪಾವನ ಮಾಡಿದ ಮಹಾಮಹಿಮರಲ್ಲಿ ಜಗಜ್ಯೋತಿ ಬಸವಣ್ಣನವರು ಅಗ್ರಗಣ್ಯರು; ಅಗ್ರಮಾನ್ಯರು. ವಿಶ್ವದ ಮಹಾಪುರುಷರ ಪಾಲಿಕೆಯಲ್ಲಿ ವಿರಾಜಮಾನರಾಗಿ ಶೋಭಿಸುವ ಅಣ್ಣನವರು ಭಾರತದ ಪ್ರಪ್ರಥಮ ಸ್ವತಂತ್ರ ವಿಚಾರವಾದಿಗಳು; ಮಾನವತಾವಾದಿಗಳು. ಅಂತೆಯೇ ಅಣ್ಣನವರ ಬಹುಮುಖ ಪ್ರತಿಭೆ ಪಾಂಡಿತ್ಯಗಳನ್ನು ಕುರಿತು ರಚಿತವಾದಷ್ಟು ಗ್ರಂಥಗಳು ಇನ್ನಾವ ಮಹಾಪುರುಷರ ಬಗೆಗೆ ರಚಿತವಾಗಿಲ್ಲ. ಇಂದಿಗೂ ಪ್ರತಿವರುಷ ಒಂದಿಲ್ಲೊಂದು ಗ್ರಂಥ ಹೊರಬರುತ್ತಲೇ ಇವೆ. ಕನ್ನಡಿಗರ ಪುಣ್ಯವೇ ಹಣ್ಣಾದಂತೆ ಜನ್ಮವೆತ್ತಿ ಬಂದ ಬಸವಣ್ಣನವರು ಕರ್ನಾಟಕದ ಕೀರ್ತಿಪತಾಕೆಯನ್ನು ಜಗವಗಲ ಮುಗಿಲಗಲ ಹಾರಾಡಿಸಿದ್ದಾರೆ; ಅವರು ಬಿತ್ತರಿಸಿದ ವಚನ ಸಾಹಿತ್ಯ ಸುಧೆ ವಿಶ್ವಸಾಹಿತ್ಯಕ್ಕೆ ಅರ್ಪಿಸಿದ ಮಹಾಕಾಣಿಕೆ ಜಾತಿ-ಮತ-ಪಂಥ-ಬೇಧಭಾವಗಳನ್ನು ಕಿತ್ತೆಸೆದು ಸಮಾನತೆ-ಸಹೋದರತೆ ಸ್ವಾತಂತ್ರ್ಯಗಳನ್ನು ಉಗ್ಗಡಿಸುವ ಅನುಭವ ಮಂಟಪ ಸ್ಥಾಪಿಸಿದ ಮಹಾದಾರ್ಶನಿಕರು. ಅವರು ನಮ್ಮ ನೆಚ್ಚಿನ ಪ್ರಧಾನಿ ಇಂದಿರಾ ಗಾಂಧಿಯವರು ಜಾರಿಯಲ್ಲಿ ತಂದಿದ್ದ ಇಪ್ಪತ್ತು ಅಂಶಗಳ ಕಾರ್ಯಕ್ರಮಗಳನ್ನು ಹನ್ನೆರಡನೆಯ ಶತಮಾನದಲ್ಲಿಯೇ ಅಣ್ಣ ಬಸವಣ್ಣನವರು ಬಳಕೆಯಲ್ಲಿ ತಂದಿದ್ದರೆಂಬುದನ್ನು ಇತಿಹಾಸಜ್ಞರು ಸ್ಪಷ್ಟಪಡಿಸಿದ್ದಾರೆ. ಪರಿಪೂರ್ಣ ಪ್ರಗತಿಶೀಲ, ಸರ್ವೋದಯ ಸಮಾಜ ರಚಿಸಿದ ಅಣ್ಣ ಬಸವಣ್ಣನವರು ಮಹಾದಾರ್ಶನಿಕರು. ಅವರ ಹೃದಯದಿಂದ ಹೊರ ಹೊಮ್ಮಿದ ವಚನಗಳೇ ಈ ಉತ್ತಮ ನಿದರ್ಶನ. ವಿಶ್ವಸಾಹಿತ್ಯಕ್ಕೆ ಕೊಟ್ಟ ಅಪೂರ್ವ ಕಾಣಿಕೆಯಾದ ವಚನ ಸಾಹಿತ್ಯ ಹೊಸ ಹೊಸ ವಿಚಾರಗಳಿಂದ ಜನತೆಗೆ ಸರಿಯಾದ ಮಾರ್ಗದರ್ಶನ ಸೂತ್ರಗಳನ್ನು ನೀಡಿದೆ. ಅದುವೇ ಶರಣ ಧರ್ಮ. ವೀರಶೈವ ನಿರ್ಣಯ ಪರಮಾವತಾರರೆನಿಸಿದ ಅಣ್ಣನವರು ಅನುಭವ ಮಂಟಪದ ಮೂಲಕ ಅಖಂಡ ನಾಡಿನ ಜನತೆಯ ದೃಷ್ಟಿಯನ್ನು ತಮ್ಮತ್ತ ಸೆಳೆದುಕೊಂಡರು. ಇದರಿಂದ ಅವರ ಮಹಾವ್ಯಕ್ತಿತ್ವದ ಪ್ರಭಾವ ಗೋಚರಿಸುತ್ತದೆ. ಶರಣ ಧರ್ಮ ಜಗದಗಲ ಮುಗಿಲುಗಳನ್ನು ವ್ಯಾಪಿಸಿ ಕಾಲವನ್ನು ಭೇದಿಸಿ ಚಿರಕಾಲ ಸ್ಥಿರ ಸಂಜೀವಿನಿಯಾದ ಧರ್ಮ. ಅದಕ್ಕೆ ದೇಶಕಾಲಗಳ ಎಡೆಯಿಲ್ಲ. ಮತ ವಿಷಯಗಳ ಹೋರಾಟವಿಲ್ಲ. ದಯವೇ ಧರ್ಮವಾಯಿತು. ನುಡಿಯೇ ನಡೆಯಾಯಿತು; ಸೃಷ್ಟಿ ಸತ್ಯವಾಯಿತು; ದೃಷ್ಟಿ ಲಿಂಗವಾಯಿತು; ವ್ಯಷ್ಟಿ ಸಮಷ್ಟಿಯಾಯಿತು. ಈ ಉದಾತ್ತ ಅನುಭಾವದ ಆಗರವಾದ ಶಿವಾನುಭವ ಮಂಟಪ ಮಾನವನ ಕಲ್ಯಾಣ ಮಂಟಪವಾಯಿತು. ಎಲ್ಲೆಲ್ಲೂ ಮಂಗಲ ಮೈವೆತ್ತು ನಿಂತಿತು. ಹಳೆಯ ಕೊಳೆ ತೊಳೆದು ಹೋಗಿ ಹೊಸ ದೃಷ್ಟಿ ಉದಯವಾಯಿತು; ಹೊಸ ದೃಷ್ಟಿ ಮೈದೋರಿತು. ಇಲ್ಲಿ ಸಲ್ಲಿ ಅಲ್ಲಿ ಸಲ್ಲಬೇಕೆಂಬ ಧರ್ಮ ಮೊತ್ತ ಮೊದಲು ಮೈದೋರಿದುದು ಬಸವಾದಿ ಪ್ರಮಥರ ಮಹಾಮನೆಯ ಅಂಗಣದಲ್ಲಿ.

> ಲೀಲಾ ಮಾತ್ರರಾಗಿ ಜನಿಸಿ, ಲೀಲಾ ಮಾತ್ರರಾಗಿ ಜೀವಿಸಿ, ಮೆರೆದ ಶಿವಯೋಗಿಗಳ ಹೃದಯದಿಂದ ಹೊರ ಹೊಮ್ಮಿದ ಮನೋಜ್ಞವೂ ಮನೋಹರವೂ ಆದ ಸ್ತೋತ್ರ ಪದಗಳು ಅಣ್ಣ ಬಸವಣ್ಣನವರ ಬಗೆಗೆ ಅವರಿಗಿದ್ದ ಉತ್ಕಟ ಭಕ್ತಿ ಪ್ರೇಮಗಳ ಕುರುಹಾಗಿವೆ.

ಶರಣ ಧರ್ಮ ಮಾನವ ಜೀವನದ ನೆಲೆ, ಬೆಲೆಗಳ ಇತ್ಯರ್ಥ ಮಾಡಲು ಹೆಣಗಿತಲ್ಲದೆ ಸಂಕುಚಿತ ಭಾವನೆಗಳ ಏರಾಟಕ್ಕೆ ಎರಗಲಿಲ್ಲ. ಅಂತೆಯೇ ಅಲ್ಲಿ ಗಂಡು ಹೆಣ್ಣು, ಮೇಲು-ಕೀಳು ಎಂಬ ಭಾವನೆಗೆ ಎಡೆಯಿಲ್ಲದಾಯಿತು. ಬೇಕೆಂಬರತಿ, ಬೇಡೆಂಬ ವಿರತಿ ಎರಡೂ ಇಲ್ಲದ ಹೊಚ್ಚ ಹೊಸ ಮನೋಧರ್ಮವನ್ನು ಎತ್ತಿ ಹಿಡಿದ ಹಿರಿಮೆ ಇವರದಾಗಿದೆ. ಆದುದರಿಂದ ಮಹಾನುಭಾವಿ ಅಣ್ಣ ನವರು ಆ ಮಹಾದೇವನು ಮಾನವಲೋಕಕ್ಕೆ ಕರುಣಿಸಿದ ಮಹಾ ಪ್ರಸಾದ ಸ್ವರೂಪರೇ ಸರಿ. ಈ ಮಹಾ ಮಹಿಮನನ್ನು ಕುರಿತು ಮಹಾಯೋಗಿಗಳೂ, ಲೀಲಾ ಪುರುಷರೂ, ಕೈವಲ್ಯಕಾರರೂ ಆಗಿದ್ದ ಬಾಲಲೀಲಾ ಮಹಾಂತ ಶಿವಯೋಗಿಗಳು ವ್ಯಕ್ತಪಡಿಸಿದ ನುಡಿ ಮುತ್ತುಗಳನ್ನು ಹೆಕ್ಕಿ ಇಲ್ಲಿ ಪ್ರಸ್ತಾಪ ಮಾಡಲಾಗಿದೆ. ಲೀಲಾಮಾತ್ರವಾಗಿ ಜನಿಸಿ, ಲೀಲಾಮಾತ್ರವಾಗಿ ಬೆಳೆದು ಲೀಲಾಮಾತ್ರವಾಗಿ ಮೆರೆದ ಶಿವಯೋಗಿಗಳ ಹೃದಯದಿಂದ ಹೊರ ಹೊಮ್ಮಿದ ಮನೋಹರವೂ ಮನೋಜ್ಞವೂ ಆದ ಸ್ತೋತ್ರ ಪರ ಶ್ಲೋಕವಿದು :

"ಶ್ರೀವೇದೋತಿತ ವೀರಶೈವ ಸಮಯಾಚಾರ
ವ್ರತ ಪ್ರಕ್ರಿಯಾ ।
ಚಾರ್ಯಾಗ್ರೇಸರ ಸಾರ್ವಭೌಮ ಮಹಿಮಾ
ಭ್ರಾಜಿಷ್ಣವೇ ಜಿಷ್ಣವೇ ॥
ಭಾಂಡಾಗಾರಧುರಂಧರಾಯ ಬಸವಾ
ಮಾತ್ಯಾಯ ಜ್ಯೇಷ್ಠಾಯತೇ ।
ಶ್ರೀಮತ್ ಕೂಡಲ ಸಂಗಮೇಶ್ವರ ಮಹಾ
ದೇವಾಯ ತಸ್ಮೈ ನಮಃ ॥"

ಮಹಾಮಂತ್ರಿಯಾಗಿ, ಮಹಾ ದಂಡನಾಯಕನಾಗಿ, ವೀರಶೈವ ಸಮಯಾಚಾರವ್ರತ ಧುರಂಧರನಾಗಿ ಮೆರೆದ ಬಸವಣ್ಣನವರ ವ್ಯಕ್ತಿತ್ವ, ಘನತೆ ಇಲ್ಲಿ ಹೆಪ್ಪುಗಟ್ಟಿ ನಿಂತಿದೆ- ಓದುಗರ ಮನದಲ್ಲಿ ಅಚ್ಚೊತ್ತಿ ಮೂಡುವಂತೆ ಚಿತ್ರಿಸಿದ್ದಾರೆ ಬಾಲಲೀಲಾ ಮಹಾಂತ ಶಿವಯೋಗಿಗಳು ಅವರೇ ಹಾಡಿದ ಇನ್ನೊಂದು ಪದ್ಯದಲ್ಲಿ ಹೀಗೆ ಅಪ್ಪಣೆ ಕೊಡಿಸಿದ್ದಾರೆ.

"ಬಸವ ಚೆನ್ನಬಸವ ಮುಖ್ಯ ಗಣತಿಂತಿಣಿಯು ।
ಎಸೆವ ಪರಶಿವಲಿಂಗ ಸನ್ನಿಧಿಯೊಳಿರುತಿಹನ ।
ವಸುಧೆಯಾಳ್ವೋಗೆಂದು ಕಳುಹಿಸಿದರ್ಕೆ ॥"

ಶ್ರೀಗಳ ಹೃದಯದುಂಬಿ ಮನದುಂಬಿ ಬಂದ ಈ ನುಡಿಗಳು ಚೇತೋಹಾರಿಗಳಾಗಿವೆ. ಅಣ್ಣನವರು ಹಮ್ಮಿಕೊಂಡ ಕಾರ್ಯವನ್ನೇ ಮುಂದುವರಿಸಲು ಅವರ ಸಾಕಾರ ರೂಪವೇ ಆಗಿ ಮೈವೆತ್ತಿ ಬಂದಿರುವೆವೆಂದು ಹೇಳುವಲ್ಲಿ ಅದೆಷ್ಟು ಔಚಿತ್ಯವಿದೆ; ಬಸವಾದಿ ಪ್ರಮಥರ ಬಗೆಗೆ ಅದೆಷ್ಟು ನಿಷ್ಠೆ; ಶ್ರದ್ಧೆ; ಪ್ರೇಮ !

ಅಣ್ಣನವರ ಬಗೆಗಿದ್ದ ಉತ್ಕಟ ಭಕ್ತಿ ಈ ಸಾಲುಗಳಲ್ಲಿ ಉಕ್ಕಿ ಬಂದಿದೆ. ಆಲಿಸಿ ಈ ಮುಕ್ತಾ ಫಲಗಳನ್ನು!

"ಬಸಿತಮಂ ಧರಿಸುವೇನು ।
ಎಸೆವ ಮಹಾಲಿಂಗವೇ ।
ಬಸವನಾಮುವ ಜಪಿಸಿ ಮರಳಿ ಮರಳಿ ॥
ಬಸವ ಬಸವಾಯೆಂದು । ಬಸಿತಂ ಧರಿಸಿದರೆ।
ಬಸವಾದಿ ಪ್ರಮಥರಿಗೆ ಪ್ರೀತಿಯಯ್ಯಾ ॥
ಬಸವಷಟ್‌ಸ್ಥಳ ಚೆನ್ನ। ಬಸವ ಪ್ರಭುಮುಖ್ಯರು
ಬಸಿತಮಂ ಧರಿಸಿ ಬಯಲಾದರಯ್ಯ ॥"

ಮೇಲಣ ಪದ್ಯದಲ್ಲಿ ಬಸವಣ್ಣನವರ ಹೆಸರು ಮಂತ್ರ ಸ್ವರೂಪವಾಗಿದೆ. ಬಸವ ನಾಮುವ ಜಪಿಸಿ ಭಸಿತವನ್ನು ಧರಿಸುವುದು ವೀರಶೈವರಾದವರ ಆದ್ಯ ಕರ್ತವ್ಯವಾಗಿದೆ. ಲಿಂಗದೇವನ ಒಲುಮೆಗೆ ಪಾತ್ರವಾಗಲು ಇದಕ್ಕಿಂತ ಸುಲಭವಾದ ಸರಳವಾದ ದಾರಿ ಯಾವುದಿದೆ ? ಬಸವಾದಿ ಪ್ರಮಥರು ಭಸಿತಕ್ಕೆ ಅದೆಷ್ಟು ಮಹತ್ವ ನೀಡಿದ್ದರೆಂಬುದು ಇಲ್ಲಿ ವ್ಯಕ್ತವಾಗಿದೆ.

"ಭಸಿತದಿಂ ನವಪ್ರಣವ। ಹಸನಾಗಿ ಅಂಗದಲಿ।
ಬಸವ ಬಸವಾಯೆಂದು ಸಂಬಂಧಿಸುವೆನು"

ಎನ್ನುವ ಶಿವಯೋಗಿಗಳ ಮುತ್ತಿನಂತಹ ಮಾತುಗಳು ಗಮನಾರ್ಹವಾಗಿವೆ.

ಬಾಲಲೀಲಾ ಮಹಾಂತ ಶಿವಯೋಗಿಗಳು ಬಸವಣ್ಣನವರನ್ನು ಎಷ್ಟು ಸ್ತುತಿಸಿದರೂ ಅವರ ಮನಕ್ಕೆ ತೃಪ್ತಿಯೆಂಬುದಿಲ್ಲ. ಇಲ್ಲೊಂದು ಸ್ತೋತ್ರ ಪದ್ಯ ಅದೆಷ್ಟು ಹೃದಯಂಗಮವಾಗಿದೆ! ಭಾವಗರ್ಭಿತವಾಗಿದೆ ನೋಡಿ.

[2೦ನೇ ಪುಟ ನೋಡಿ]

# "ಶ್ರೀ ಅರವಿಂದರ ಆಧ್ಯಾತ್ಮಿಕ ಜೀವನ-ಮಹಾಮಾತೆಯವರ ಪಾತ್ರ"

ಎನ್ಕೆ

[ಹಿಂದಿನ ಸಂಚಿಕೆಯಿಂದ]

1931ರ ಹೊತ್ತಿಗೆ ಈ ಸುಪ್ರಮಾನಸ ಶಕ್ತಿ ತನ್ನ ಪ್ರಭಾವವನ್ನು ಬೀ ಉ ಪ್ರಾರಂಭಿಸಿದುದು ಮಹಾಮಾತೆಯವರ ಅನುಭವಕ್ಕೆ ಬಂತು.

ಮಹಾಮಾತೆಯವರು ಮೃತರಾಗಿಲ್ಲ; ಕೇವಲ ದೇಹಾಂತರ ಹೊಂದಿದ್ದಾರೆ. ಇನ್ನು ಮುಂದೆ ಅವರ ಕಾರ್ಯವು ಅರವಿಂದಾಶ್ರಮಕ್ಕಷ್ಟೇ ಸೀಮಿತವಲ್ಲ. ಜಗತ್ತೇ ಇನ್ನು ಮುಂದೆ ಅವರ ಆಶ್ರಮ.

ಸುಪ್ರಮಾನಸ ಸ್ಪರ್ಶದಿಂದ ಜಡವು ಪರಿವರ್ತನೆಯನ್ನು ಹೊಂದುವದು. ಮತ್ತು ಕಾಲಾನುಸಾರವಾಗಿ ಜಡದೇಹವು ಪರಿವರ್ತನಗೊಂಡು ಸುಪ್ರಮಾನಸ ದೇಹವಾಗಿ ಆವಿರ್ಭವಿಸುವದು ಇಂತಹ ಸುಪ್ರಮಾನಸ ದೇಹದ ಲಕ್ಷಣಗಳೇನು? ಮಾತೆಯವರು ಕಂಡುಕೊಂಡಂತೆ ಹಗುರತನ, ಮಾರ್ಪಡಿಸಿಕೊಳ್ಳುವ ಗುಣ, ಪ್ರಸರಣ ಆಕುಂಚನ ಹೊಂದುವ ಗುಣ, ಮತ್ತು ಪ್ರಕಾಶಮಾನವಾಗುವ ಗುಣ.

"ಈ ಜಡ ದೇಹವು ಸಂಪೂರ್ಣವಾಗಿ ದೈವೀ ದೇಹವಾಗಿ ಮಾರ್ಪಟ್ಟಾಗ ಅದು ಗಾಳಿಗಿಂತ ಹಗುರಾಗಿ ಅಂತರಿಕ್ಷದಲ್ಲಿ ಸಂಚರಿಸುತ್ತಿರುವಂತೆ ಭಾಸವಾಗುತ್ತದೆ. ತಮೋಭಾಗವು ಅದರಿಂದ ನಿಶ್ಶೇಷವಾಗಿ ಹೊರಬಿದ್ದು ಹೋಗಿರುತ್ತದೆ. ಇದರ ವಿದ್ಯಮಾನವು ಕೇವಲ ಪ್ರಕಾಶಮಯವಾಗಿರುತ್ತದೆ. ಪ್ರತಿಯೊಂದು ಕಣವೂ ದೈವೀ ಪ್ರಭುತ್ವವನ್ನು ಪ್ರತಿಬಿಂಬಿಸುತ್ತದೆ" ಎಂದು ಮಾತೆಯವರು ಹೇಳುತ್ತಾರೆ. ಸುಪ್ತ ಪ್ರಜ್ಞೆಯು (The unconscious) ಒಂದು ಏಣಿಯಂತೆ ಇರುತ್ತದೆ. ಯುಗ ಯುಗಾಂತರದಲ್ಲಿ ಒಬ್ಬೊಬ್ಬ ವಿಭೂತಿ ಪುರುಷನೂ ಈ ಏಣಿಯ ಒಂದೊಂದು ಹೆಜ್ಜೆಯನ್ನು ಮೇಲಕ್ಕೇರಿದ್ದಾನೆ. ಈ ಜಡ ಪ್ರಜ್ಞೆಯಿಂದ ಸಂಪೂರ್ಣ ಹೊರಬಂದ ಉನ್ನತ ಸ್ತರದ ಪ್ರಜ್ಞೆಯನ್ನು ಹೊಂದುವದು ಸಾಧ್ಯವಿದೆ. ಅದೇ ಕಾಲಕ್ಕೆ ಇಂತಹ ಉನ್ನತ ಸ್ತರದ ಪ್ರಜ್ಞೆಯು ಪೃಥ್ವೀ ಸ್ತರಕ್ಕೆ ಇಳಿದು ಬಂದು ಅವನ್ನು ಪರಿವರ್ತನಗೊಳಿಸುವದೂ ಅವಶ್ಯವಿದೆ. ಮಾತೆಯವರ ಮಾತಿನಲ್ಲಿ ಹೇಳುವದಾದರೆ "ಉತ್ತರಣ ಅವತರಣಗಳನ್ನು ಒಂದುಗೂಡಿಸುವುದೇ ಸಾಕ್ಷಾತ್ಕಾರದ ರಹಸ್ಯ. ಇದೇ ಅವತಾರದ ಕಾರ್ಯ." ಈ ಅವತಾರವೇ ಅತಿಮಾನಸ ಪ್ರಜ್ಞೆ. ಅತಿಮಾನಸವು ಪೃಥ್ವಿಗೆ ಇಳಿದಾಗಲೂ ತನ್ನತನವನ್ನು ಉಳಿಸಿಕೊಂಡು ಹೊಸ ಸೃಷ್ಟಿಯನ್ನು ಸ್ಥಾಪಿಸಲು ಕಾರ್ಯ ಮಾಡುವದು. ಶ್ರೀ ಅರವಿಂದರ ಅತಿಮಾನಸ ಪ್ರಜ್ಞೆಯ ಕಲ್ಪನೆಯ ಸಾರಸಂಗ್ರಹ ಇದು. ಎಂತೆಂತಹ ವಿಘ್ನಗಳು ಅಡ್ಡ ಬಂದರೂ ಅವತಾರದ ಕಾರ್ಯವು ನಡೆದೇ ಇರುತ್ತದೆ. ಅದರ ಕಾರ್ಯಕ್ಕೆ ಯಾವ ಬಾಜಾ ಬಜಂತ್ರಿಯೂ ಬೇಕಾಗಿಲ್ಲ.

1950 ರಿಂದ ಮಾತೆಯವರು ದೈನಿಕ ಟಿಪ್ಪಣಿಗಳಲ್ಲಿ ಅತಿಮಾನಸ ಪ್ರಜ್ಞೆಯ ಬಗ್ಗೆ ಹಾಗೂ ಸುಪ್ರಮಾನಸ ದೇಹದ ಬಗ್ಗೆ ಮಹತ್ವದ ರಹಸ್ಯಗಳನ್ನು ಹೊರಗೆಡಹಿದ್ದಾರೆ. 1950ರಲ್ಲಿ ಬರೆದ ಟಿಪ್ಪಣೆಗಳಲ್ಲಿ ಶ್ರೀ ಅರವಿಂದರ ಮಹಾ ಪ್ರಸ್ಥಾನವನ್ನು ಕುರಿತು ತಾಯಿಯವರು ಹೀಗೆ ಬರೆಯುತ್ತಾರೆ. "ಶ್ರೀ ಅರವಿಂದರು ಜಗತ್ತಿಗಾಗಿ ಏನು ಅದ್ಭುತ ತ್ಯಾಗಗೈದಿದ್ದಾರೆ ಎಂಬುದರ ಕಲ್ಪನೆ ಜನಕ್ಕಿಲ್ಲ. ಸುಮಾರು ಒಂದು ವರ್ಷದ ಹಿಂದೆ ಕೆಲವೊಂದು ವಿಷಯಗಳನ್ನು ಪ್ರಸ್ತಾಪಿಸುತ್ತ ನಾನು ಈ

ದೇಹವನ್ನು ತ್ಯಜಿಸಬೇಕೆಂದು ಮನಸ್ಸಾಗುತ್ತಿದೆ. ಎಂದು ನುಡಿಯಲಾಗಿ ಗಂಭೀರವ ನಿಶ್ಚಲ ಧ್ವನಿಯಲ್ಲಿ ಅವರು ನನಗೆ ಹೇಳಿದರು–"ಇಲ್ಲ ಆದಾಗದು. ಅವಶ್ಯ ಬಿದ್ದರೆ ಈ ಸುಪ್ರಮಾನಸ ಪರಿವರ್ತನೆಗಾಗಿ ನಾನೇ ಹೋಗ ಬಹುದು. ನಮ್ಮ ಸುಪ್ರಮಾನಸ ಅವತಾರ ಹಾಗೂ ಪರಿವರ್ತನೆಯ ಯೋಗವನ್ನು ಈಡೇರಿಸುವುದಕ್ಕಾಗಿ ನೀವು ಉಳಿಯಬೇಕಾಗುವದು.

ಶ್ರೀ ಅರವಿಂದರು ಮಹಾಸಮಾಧಿಯನ್ನು ಹೊಂದಿದ ಮೇಲೂ ಕೂಡ ಮಾತೆಯವರು ಅವರೊಂದಿಗೆ ಆಗಾಗ ಸಂಪರ್ಕವನ್ನು ಬೆಳೆಸುತ್ತಿದ್ದರು. ಅವರಿಂದ ಸಲಹೆ, ಮಾರ್ಗದರ್ಶನ ಪಡೆಯುತ್ತಿದ್ದರು. ಒಮ್ಮೆ ಶ್ರೀ ಅರ ವಿಂದರೇ ಪುನರ್ಜೀವಧಾರಣೆ ಮಾಡಬೇಕೆಂದು ಕೇಳಿ ಕೊಂಡಾಗ ಅರವಿಂದರು ಸ್ಪಷ್ಟವಾಗಿ ನುಡಿದ ಮಾತು ಗಳಿವು.

"ನಾನು ಈ ದೇಹವನ್ನು ಉದ್ದೇಶಪೂರ್ವಕವಾಗಿಯೇ ತ್ಯಜಿಸಿದ್ದೇನೆ. ಇದನ್ನು ನಾನು ಮತ್ತೆ ಧರಿಸಲಾರೆ. ಪ್ರಥಮ ಸುಪ್ರಮಾನಸ ದೇಹದಲ್ಲಿ, ಸುಪ್ರಮಾನಸ ರೀತಿಯಲ್ಲಿ ನಾನು ಮತ್ತೆ ಕಾಣಿಸಿಕೊಳ್ಳುತ್ತೇನೆ."

1938ರಲ್ಲಿಯೇ ಸುಪ್ರಮಾನಸವು ಶ್ರೀ ಅರವಿಂದ ರನ್ನು ಪ್ರವೇಶಿಸಲು ಪ್ರಾರಂಭಿಸಿತ್ತು. ಆದರೆ ಆಗ ಶ್ರೀ ಅರವಿಂದರು ಅದನ್ನು ತಮ್ಮಲ್ಲಿ ತಡೆದು ನಿಲ್ಲಿಸಿಕೊಳ್ಳಲು ಸಮರ್ಥರಾಗಲಿಲ್ಲ. ಸುಪ್ರಮಾನಸವು ಅಷ್ಟೆ ಬರುತ್ತಿತ್ತು, ಸ್ಪರ್ಶ ಮಾಡುತ್ತಿತ್ತು, ಮತ್ತೆ ಹೋಗಿಬಿಡುತ್ತಿತ್ತು. 1953ರ ತಮ್ಮ ಟಿಪ್ಪಣಿಗಳಲ್ಲಿ ಮಾತೆಯವರು ಹೀಗೆ ಬರೆಯುತ್ತಾರೆ.

"ಶ್ರೀ ಅರವಿಂದರು ಪಾರ್ಥಿವ ದೇಹವನ್ನು ತ್ಯಜಿಸಿದ ಮೇಲೆ ಪ್ರಕಾಶಮಾನಸವು ಅಲ್ಲಿ ಕಂಡುಬಂತು....ಸುಪ್ರ ಮಾನಸವು ಅವರಲ್ಲಿ ಬಹುದಿನಗಳ ಹಿಂದೆಯೇ ಅವ ತರಿಸಿತ್ತು. ಅದು ಅವರ ಮಾನಸ ಸ್ತರದಲ್ಲಿ, ಪ್ರಾಣಿಕ ಸ್ತರದಲ್ಲಿ ಕೂಡ ಅವತರಿಸಿತ್ತು. ಅನ್ನಮಯ ಕೋಶ ದಲ್ಲಿಯೂ, ಕೂಡ ಅದು ತನ್ನ ಕಾರ್ಯವನ್ನು ಆರಂಭಿ ಸಿತ್ತು, ಆದರೆ ಈ ಮಾಧ್ಯಮಗಳ ಮೂಲಕ. ಈಗಿದ್ದ ಪ್ರಶ್ನೆಯೆಂದರೆ ಅನ್ನಮಯ ಅಥವಾ ಪೃಥ್ವಿಸ್ತರದಲ್ಲಿ ನೇರ ವಾದ ಸುಪ್ರಮಾನಸದ ಕಾರ್ಯ ಜಡಮನಸ್ಸು ಸುಪ್ರ ಮಾನಸ ಪ್ರಕಾಶವನ್ನು ಸ್ವೀಕರಿಸಲು ಸಮರ್ಥವಾದರೆ ಮಾತ್ರ ಇದು ಸಾಧ್ಯ ಎಂದು ಅರವಿಂದರು ನುಡಿದಿದ್ದರು ಅತ್ಯಂತ ಜಡಮಯವಾದ ಸ್ತರದ ಮೇಲೆ ಸುಪ್ರಮಾನ ಸದ ಕಾರ್ಯ ಆಗಬೇಕೆಂದರೆ ಅದು ಜಡಮನಸ್ಸಿನ ಮುಖಾಂತರವೇ. ಸುಪ್ರಮಾನಸ ಪ್ರಕಾಶವನ್ನು ಸ್ವೀಕರಿ ಸುವ ಈ ಜಡಮನಸ್ಸನ್ನು ಶ್ರೀ ಅರವಿಂದರು ಪ್ರಕಾಶ ಮಾನಸ ಎಂದು ಕರೆದಿದ್ದಾರೆ."

ಪಾರ್ಥಿವ ದೇಹವು ದೈವೀ ದೇಹವಾಗುವ ಪರಿವರ್ತನೆ ಯನ್ನು ಕುರಿತು ಮಾತೆಯವರು ಹೀಗೆ ನುಡಿದಿದ್ದಾರೆ. "ಇಂತಹ ಒಂದು ಪರಿವರ್ತನೆ ಒಬ್ಬ ಸಾಧಕನ ಜೀವಿತ ಕಾಲದಲ್ಲಿಯೇ ನಡೆಯಬೇಕಾದರೆ ಜೀವವು ಸಾಕಷ್ಟು ದೀರ್ಘಾವಧಿಯುಳ್ಳದ್ದಾಗಬೇಕಾಗುವದು. ನೀವು ಇಚ್ಛಾ ಮರಣಿಗಳಾಗಬೇಕಾಗುವದು. ಹಾಗೆಂದಾಗ ಮಾತ್ರ ಇಂತಹ ಬದಲಾವಣೆ ಸಾಧ್ಯವಾಗಬಹುದು. ಒಮ್ಮೆ ಶ್ರೀ ಅರವಿಂದರು ಯಾವ ಅನುಮಾನವೂ ಇಲ್ಲದೆ ಹೇಳಿದ್ದೇನೆಂದರೆ–"ಇಂತಹ ದೈವೀ ದೇಹದ ಪರಿವರ್ತ ನೆಯು ಪ್ರಾಪ್ತವಾಗಲು ಸುಮಾರು ಮೂರು ನೂರು ವರ್ಷಗಳು ಬೇಕಾಗಬಹುದು. ಎಂದರೆ ಸಾಧಕನು ದೈವೀ ಸಂಪರ್ಕವನ್ನು ಸಾಧಿಸಿದ ನಂತರ ಈ ಅವಧಿ ಬೇಕಾಗುವದೆಂದು ನಾನು ಹೇಳಬಹುದು."

ಪಾರ್ಥಿವ ದೇಹದ ಪರಿವರ್ತನೆಯೆಂದರೆ ಸರ್ವಶಕ್ತಿ ಗಳ ಶಾಸ್ತ್ರೋಕ್ತ ಕೇಂದ್ರೀಕರಣದಿಂದ ಸಾಧಿಸಬೇಕಾಗು ತ್ತದೆ. ನಿಮ್ಮ ಅಂತಸ್ಥ ಶಕ್ತಿಗಳು ತರಂಗಿತಗೊಂಡು ಒಂದು ವ್ಯವಸ್ಥೆಯನ್ನು ಏರ್ಪಡಿಸಿ ಶರೀರದ ಒಂದೊಂದೇ ಅಂಗದಲ್ಲಿ ಒಂದೊಂದೇ ಕಣದ ಆತ್ಮ ಪ್ರಜ್ಞೆಯ ಚೇತನ ದಿಂದ ಬದಲಾವಣೆಗೊಳಿಸಬೇಕಾಗುವದು. ಈ ಚೇತನ ಶಕ್ತಿಯು ಅದಕ್ಕೂ ಉನ್ನತವಾದ ಇನ್ನೊಂದು ಶಕ್ತಿಯ ಕೇಂದ್ರೀಕರಣದಿಂದ ಕಾರ್ಯ ಮಾಡುತ್ತದೆ.

ಈ ದೈವೀ ಶರೀರದ ಸ್ವರೂಪವೆಂತಹದು ಎಂಬ ಬಗ್ಗೆ ಮಾತೆಯವರು ದಿವ್ಯ ಚಕ್ಷುದರ್ಶನದಿಂದ ಅದನ್ನು ಹೀಗೆ ವರ್ಣಿಸುತ್ತಾರೆ:

"ಈ ದಿವ್ಯ ಶರೀರಕ್ಕೆ ಹೊಟ್ಟೆಯೆಂಬುದು ಇರುವ ದಿಲ್ಲ. ಹೃದಯವೂ ಕೂಡ ಇರುವುದಿಲ್ಲ. ಇವುಗಳ ಕಾರ್ಯವು ದಿವ್ಯ ದೇಹದಿಂದ ಹೊರಡುವ ತರಂಗಗಳ

ವ್ಯವಸ್ಥೆಯಿಂದ ನಡೆಯುತ್ತದೆ. ಮನುಷ್ಯನ ಶಾರೀರಿಕ ಇಂದ್ರಿಯಗಳು ಚೈತನ್ಯದ ಸಾಂಕೇತಿಕ ಕೇಂದ್ರಗಳು ಮಾತ್ರ ಆಗಿವೆ. ಅವು ಆವಶ್ಯಕ ಸತ್ಯ ಸಂಗತಿಗಳಲ್ಲ. ಮಾನವ ಶರೀರಕ್ಕೆ ವಿವಿಧ ಇಂದ್ರಿಯಗಳು ಒಂದು ಸೌಂದರ್ಯವನ್ನು ಮಾತ್ರ ನೀಡುತ್ತವೆ. ಪರಿವರ್ತಿತ ದೈವೀ ದೇಹವು ತನ್ನ ನಿಜವಾದ ಚೈತನ್ಯದ ಕೇಂದ್ರಗಳ ಮುಖಾಂತರ ಕಾರ್ಯ ಮಾಡುತ್ತದೆ, ಪ್ರಾಣಿ ಶರೀರದ ಇಂದ್ರಿಯಗಳಿಂದಲ್ಲ. ಇದರಿಂದಾಗಿ ಶರೀರದ ಯಾಂತ್ರಿಕ ಚಲನವಲನಗಳು ದೈವೀ ದೇಹದಲ್ಲಿ ಉದ್ದೇಶಪೂರ್ವಕವಾದ ನಿಯಂತ್ರಣದಿಂದ ನಡೆಯಬೇಕಾಗುವುದು. ಪ್ರಾಣಿ ಶರೀರದ ಅಂಗಾಂಗ ರಚನೆಗಳು ಇರುವದಿಲ್ಲ. ಎಂದರೆ ದೈವೀ ಶರೀರವನ್ನು ಗುರುತಿಸಲಿಕ್ಕೇ ಬ ರು ವ ದಿ ಲ್ಲ ಎಂದಲ್ಲ. ದೈವೀ ಶರೀರದ ರಚನೆ ಪಾರ್ಥಿವ ಕಣಗಳಿಂದ ಉಂಟಾಗಿದೆ ಅವುಗಳ ಗುಣಗಳಿಂದ ಉಂಟಾಗುತ್ತದೆ. ಎಂದರೆ ಚೇತನದ ಪ್ರವಾಹವೇ ಶರೀರವಾಗಿ ರೂಪ ಗೊಂಡಂತೆ ಇರುತ್ತದೆ. ಅದು ನುಣುಪಾಗಿರುತ್ತದೆ. ಚಲನಶೀಲವಾಗಿರುತ್ತದೆ- ನಮ್ಮ ಮನೋಭಾವಗಳಿಗೆ ಅನುಗುಣವಾಗಿ ನಮ್ಮ ಮುಖದ ಚಲನವಲನಗಳು ತೋರಿಬರುವಂತೆ ಆಂತರಿಕ ಚಲನೆಯ ಆವಶ್ಯಕತೆಯ ಮೇರೆಗೆ ದೈವೀ ಶರೀರದ ವಲನ ಉಂಟಾಗುವದು' ನೀವು ಸ್ವಪ್ನದಲ್ಲಿ ಗಾಳಿಯಲ್ಲಿ ಸ ಂ ಚ ರಿ ಸಿ ಲ್ಲ ವೆ? ಹಾಗೆಯೇ ದೈವೀ ಶರೀರಧಾರಿಯಾಗಿ ಅಂತರಿಕ್ಷದಲ್ಲಿ ಮೊಳಕೈಯಿಂದ ಒಂದಿಷ್ಟು ಗಾಳಿಯನ್ನು ನೂಕಿದರೆ ಸಾಕು ನಿಮಗೆ ಯಾವ ದಿಕ್ಕಿಗೆ ಹೋಗಬೇಕೋ ಆ ದಿಕ್ಕಿಗೆ ಹೋಗುತ್ತೀರಿ. ನಿಮ್ಮ ಕಾಲಿನಿಂದ ಒಂದಿಷ್ಟು ಅಮುಕಿದರೆ ಸಾಕು ಇನ್ನೆಲ್ಲಿಗೋ ಹೋಗಿ ಇಳಿಯುತ್ತೀರಿ. ನಿಮ್ಮ ಇಚ್ಛೆಯ ಮೇರೆಗೆ ನಿಮ್ಮ ದೇಹವು ಪಾರದರ್ಶಕವಾಗಬಲ್ಲದು. ನೀವು ಘನವಾದ ಗೋಡೆಯನ್ನು ಸುಲಭವಾಗಿ ಪ್ರವೇಶಿಸಬಹುದು ಸ್ವಪ್ನದಲ್ಲಿ ನೀವು ಈ ರೀತಿಯಾಗಿ ನಡೆದುಕೊಳ್ಳುವಂತೆಯೇ ಪರಿವರ್ತಿತ ದೇಹವು ಕೂಡ ಇದೇ ರೀತಿಯಾಗಿ ನಡೆದುಕೊಳ್ಳುತ್ತದೆ. ದಿವ್ಯ ಶರೀರವು ಹಗುರಾಗಿರುತ್ತದೆ, ಪ್ರಕಾಶಮಾನವಾಗಿರುತ್ತದೆ. ಪ್ರಸರಣ ಆಕುಂಚನ ಗುಣಗಳಿಂದ ಕೂಡಿರುತ್ತವೆ.

ಇಂತಹ ಒಂದು ದೇಹರಚನೆಗೆ ಮೂರು ನೂರು ವರ್ಷಗಳು ಏನೂ ಅಲ್ಲ. ಸಾವಿರ ವರ್ಷಗಳು ಕೂಡ ಸ್ವಲ್ಪವೇ. ಎಂದರೆ ನಿಮ್ಮ ಪಾರ್ಥಿವ ದೇಹದ ದೈವೀ ಪರಿವರ್ತನೆಯು ನಿಮ್ಮ ಜೀವಿತ ಕಾಲದಲ್ಲಿ ಉಂಟಾಗುವುದನ್ನೇ ನಾನು ಹೇಳುತ್ತಿದ್ದೇನೆ. ಜನ್ಮಾಂತರಗಳಿಂದ ದೇಹ ಬದಲಾವಣೆಗಳಾಗಬಹುದು. ಆದರೆ ಅವು ಅದೇ ದೇಹ ಎನಿಸಲಾರವು. 50ಕ್ಕೆ ದೇಹವು ಶಿಥಿಲಗೊಳ್ಳ ತೊಡಗುತ್ತದೆ. ಆದರೆ ನಿಮ್ಮದು ಪರಿಪೂರ್ಣಗೊಳ್ಳುತ್ತಿರುವ ದೇಹವಾದರೆ ಒಂದೊಂದು ವರ್ಷಕ್ಕೆ ಒಂದೊಂದು ಪ್ರಗತಿಯ ಹೆಜ್ಜೆಯನ್ನು ಮುಂದುವರಿಸುತ್ತ ಅನಿರ್ದಿಷ್ಟ ಕಾಲದವರೆಗೆ ನೀವು ದಿವ್ಯ ದೇಹದತ್ತ ಮುಂದುವರಿಯುತ್ತ ಸಾಗುವಿರಿ. ನೀವೀಗ ಅಮರರಲ್ಲವೇ ?"

ಶ್ರೀ ಅರವಿಂದರು ಉದ್ದೇಶಿಸಿದ್ದ ದಿವ್ಯ ದೇಹಧಾರಣೆಯ ಸಾಧನೆಯಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ವಹಿಸಿದ್ದಾರೆ. ಶ್ರೀ ಅರವಿಂದರು ತಮ್ಮ ಮುಂದಿನ ಅವತಾರದಲ್ಲಿ ಸಾಧಿಸುವದಾಗಿ ನುಡಿದಿದ್ದ ದಿವ್ಯ ದೇಹದ ಸ್ವರೂಪವನ್ನು ಮಾತೆಯವರು ದಿವ್ಯ ಚಕ್ಷುವಿನಿಂದ ಮುಂಗಂಡಿದ್ದರು.

1973ರ ನವೆಂಬರ್ 17ರಂದು ಮಹಾಮಾತೆಯವರು ಮಹಾಸಮಾಧಿಯನ್ನು ಹೊಂದಿದ ಪ್ರಸಂಗವು ಈ ಸಂದರ್ಭದಲ್ಲಿ ಮಹತ್ವಪೂರ್ಣವಾಗಿದೆ. ಮಾರ್ಚ್ 1972ರ ಬುಲೆಟಿನ್‌ನಲ್ಲಿ ಅದ್ಭುತ ಅಪೂರ್ವ ಸಂಗತಿಯೊಂದನ್ನು ಮಹಾಮಾತೆಯವರು ಬಹಿರಂಗಪಡಿಸಿದ್ದಾರೆ. ಅದೇನೆಂದರೆ ಮಾತೆಯವರು ದಿವ್ಯ ದೇಹಧಾರಣೆಯ ಅನುಭವವನ್ನು ಪಡೆದರು. ತಾವು ಈ ದಿವ್ಯ ದೇಹ ಧಾರಣೆ ಮಾಡಿದುದು ಸ್ವ ಪ್ನ ವ ಲ್ಲ. ಅದು ಸತ್ಯ ಘಟನೆ ಯೆಂಬುದನ್ನು ಖಚಿತಪಡಿಸಿದ್ದಾರೆ. ಒಂದು ಸುಂದರ ಸುಪ್ರಭಾತದಲ್ಲಿ ಮಾತೆಯವರ ;ಮಾ ನು ಷ ದೇಹವು ಪರಿವರ್ತಿತವಾಗಿತ್ತು. ಮಾತೆಯವರು ಇದನ್ನು ಮುಟ್ಟಿ ಮುಟ್ಟಿ ನೋಡಿಕೊಂಡು ಅನುಭವಿಸಿದ್ದಾರೆ. ಮಾತೆಯವರು ನಿಲುವುಗನ್ನಡಿಯಲ್ಲಿ ನೋಡಿಕೊಂಡಾಗ ಅವರ ದೇಹವು ದಿವ್ಯ ಸ್ವರೂಪವನ್ನು ಪಡೆದುದನ್ನು ಕಂಡು ಕೊಂಡರು. ಇನ್ನೂ ಮುಂದೆ ಹೋಗಿ ಈ ದಿವ್ಯ ದೇಹವು ಯಾವುದೇ ಲೈಂಗಿಕ ಗುರುತುಗಳನು ಪಡೆದಿರಲಿಲ್ಲ ಎಂದೂ ನುಡಿದಿದ್ದಾರೆ. ಬಹುಶಃ ಮಾತೆಯವರು ದಿವ್ಯ ದೇಹಧಾರಣೆಯನ್ನು ನಿರೀಕ್ಷಿಸುತ್ತಿದ್ದಿರಬೇಕು. ಆದರೆ ಮತ್ತೊಂದು ಪ್ರಶ್ನೆ–ಅವರ 95 ವಯಸ್ಸಿನ

ದೇಹವು ಈ ಪರಿಸ್ಥಿತಿಯಲ್ಲಿ ಹೊಸ ಬದಲಾವಣೆಯನ್ನು ತಾಳಿಕೊಳ್ಳಬಹುದಿತ್ತೆ ? ಶ್ರೀ ಎಂ. ಪಿ. ಪಂಡಿತರಿಂದ ಈ ಸಾಲುಗಳನ್ನು ವೀಕ್ಷಿಸ ಬಹುದು :

"ಮಾತೆಯವರ ಮಟ್ಟಿಗೆ ತಮ್ಮ ಮಾನವ ಪ್ರಕೃತಿಯನ್ನು ದೈವೀ ಪ್ರಕೃತಿಗೆ ಪಾರ್ಪಡಿಸುವ ಪ್ರಶ್ನೆಯೇ ಇರಲಿಲ್ಲ ನಮ್ಮಂಥವರಿಗೆ ಅದು ಜೀವಿತ ಕಾಲದ ಪ್ರಶ್ನೆಯಾಗಿತ್ತು. ಅವರಿಗೆ ಈ ಪ್ರಶ್ನೆ ಇರಲಿಲ್ಲ. ಏಕೆಂದರೆ ಕಳೆದ 50–60 ವರ್ಷಗಳಿಂದ ಅವರು ಮಾನವ ಪ್ರಕೃತಿಯನ್ನು ಬಿಟ್ಟು ದೈವೀ ಪ್ರಕೃತಿಯನ್ನು ಧರಿಸುತ್ತ ಬಂದಿದ್ದರು. ಮಾನವ ದೇಹದ ಪರಿವರ್ತನೆಯೆಂದರೆ ಒಂದೊಂದು ಕಣವನ್ನೂ ಒಲಿಸಿಕೊಂಡು ಅದು ಬದಲಾಗುವಂತೆ ಮುದ್ದು ಮಾಡಬೇಕು. ಅದನ್ನು ಪರಿವರ್ತನ ಶಕ್ತಿಗೆ ಗುರಿಪಡಿಸಬೇಕು. ಕಣವು ಬದಲಾವಣೆಯನ್ನು ನಿರಾಕರಿಸಿದಾಗ ದೇಹದ ಮೇಲೆ ಅದರ ಪರಿಣಾಮವಾಗುತ್ತದೆ. ಯಾವ ಮದ್ದಿಗೂ ಮಣಿಯದಂತಹ ನೋವನ್ನು ತಡೆದುಕೊಳ್ಳಬೇಕಾಗುತ್ತದೆ. ಮಾನವ ದೇಹದಲ್ಲಿ ಇಂತಹ ಕೋಟ್ಯಾಂತರ ಕಣಗಳಿರುತ್ತವೆ. ಒಂದೊಂದು ಕಣವನ್ನೂ ಹೀಗೆ ಬದಲಿಸುವುದು ಅತ್ಯಂತ ಶ್ರಮದ, ತಾಳ್ಮೆ ಪರೀಕ್ಷೆಯ ವಿಧಾನ. ಮಾತೆಯವರು ಇಂತಹ ವಿಧಾನವನ್ನು ನಡೆಸಿದರು. ಈ ಪರಿವರ್ತನ ಕಾಲವು ಕೆಲವೇ ವರ್ಷಗಳಲ್ಲಿ ಸಂಗ್ರಹಿಸಲ್ಪಡಬಹುದೆಂದು ಯಾರೂ ನಿರೀಕ್ಷಿಸಿರಲಿಲ್ಲ. ಕೇವಲ ಪವಾಡದಿಂದ ಮಾತ್ರ ಇದನ್ನು ಸಾಧಿಸಬಹುದಿತ್ತು. ಆದರೆ ಮಾತೆಯವರಿಗೆ ಪವಾಡಗಳಲ್ಲಿ ವಿಶ್ವಾಸವಿರಲಿಲ್ಲ.

ಮಾತೆಯವರು ದೇಹದ ಪರಿವರ್ತನೆಗಾಗಿ ಕೆಳಗಿನಿಂದ ಪ್ರಯತ್ನ ನಡೆಸಿದ್ದರೆ ಮೇಲಿನಿಂದ ಶ್ರೀ ಅರವಿಂದರ ದಿವ್ಯ ಪ್ರಜ್ಞೆಯ ಪ್ರಯತ್ನವೂ ನಡೆದಿದ್ದಿತು ಮೆಟ್ಟಿಲು ಮೆಟ್ಟಿಲಾಗಿ, ಕಣ ಕಣವಾಗಿ, ಅಣು ಅಣುವಾಗಿ ಮಾತೆಯವರ ಕಾರ್ಯ ನಡೆದಿದ್ದಿತು. ತತ್ಪರಿಣಾಮವಾಗಿ ದಿವ್ಯ ದೇಹವು ರಚನೆಯ ಅವಸ್ಥೆಯಲ್ಲಿ ಇದ್ದಿತು. ದಿವ್ಯ ದೇಹದ ಸ್ವರೂಪ ವರ್ಣನೆಯನ್ನು ಮಾತೆಯವರೂ ಮಾಡುತ್ತಲೇ ಬಂದಿದ್ದರು. ವರುಷದ ಕೆಳಗೆ ಮಾತೆಯವರು ತಮ್ಮ ಸಮೀಪವರ್ತಿಯ ಬಳಿ ಈ ಮಾತು ಹೇಳಿದ್ದರು. "ಈ ಭೌತಿಕ ದೇಹವನ್ನು ಆ ದಿವ್ಯ ದೇಹದಲ್ಲಿ ಲೀನಗೊಳಿಸಬೇಕೆಂದು ನಾನು ಯತ್ನಿಸುತ್ತಿದ್ದೇನೆ. ನನಗೆ ಇದರ ಹಿಡಿತವೂ ದೊರಕುತ್ತಿಲ್ಲ. ಈ ಪೃಥ್ವಿಯ ಮೇಲೆ ಇದುವರೆಗೂ ಯಾರೂ ಈ ರೀತಿಯಾಗಿ ಪ್ರಯತ್ನಿಸಿಲ್ಲ. ಇದರ ರಹಸ್ಯವೂ ನನಗೆ ದೊರೆತಿಲ್ಲ;" ಹೀಗೆ ನುಡಿದ ಮಾತೆಯವರು ಆ ರಹಸ್ಯವನ್ನು ಹುಡುಕಲು ಹವಣಿಸುತ್ತಿದ್ದರು.

ಮಾತೆಯವರು ದಿವ್ಯ ಪ್ರಭೆಯ ದೇಹವನ್ನು ರಚಿಸಿ ತಾವು ಮೃತರಾಗದೆ ಸದೇಹರಾಗಿ ಅದರಲ್ಲಿ ಪ್ರವೇಶಿಸಬೇಕೆನ್ನುತ್ತಿದ್ದರು. 'ಮೃತರಾಗದೆ' ಎಂಬುದರ ಅರ್ಥ ಇಷ್ಟೆ–ಭೌತಿಕ ದೇಹದ ಪ್ರಜ್ಞೆಯನ್ನು ಕಳೆದುಕೊಳ್ಳದೆ ದಿವ್ಯ ದೇಹದಲ್ಲಿ ಪ್ರವೇಶಿಸುವುದು. ಹೀಗೆ ಈ ದೈಹಿಕ ಇರುವಿಕೆಗೆ ಚ್ಯುತಿ ಬಾರದಂತೆ ದಿವ್ಯಪ್ರಭಾ ಶರೀರದಲ್ಲಿ ಪ್ರವೇಶ ಮಾಡುವುದು ಮಾತೆಯವರ ಮನೀಷೆಯಾಗಿದ್ದಿತು. ಮಾತೆಯವರು 1973, ನವೆಂಬರ್ 17 ರಂದು ಎಂದರೆ ಅವರು ಮಹಾಸಮಾಧಿಯನ್ನು ಹೊಂದುವ ದಿನದಂದು ಆಶ್ರಮದ ಮಿತ್ರರೊಬ್ಬರು ಮಾಂತ್ರಿಕ ಶಕ್ತಿಯಿಂದ ಮಾತೆಯವರ ಈ ಪ್ರಭಾ ಶರೀರವನ್ನು ಕಂಡುದಾಗಿ ತಿಳಿಸಿದ್ದರು. "ಆದರೆ ಈ ದಿವ್ಯ ಪ್ರಭೆಯ ನವ ಶರೀರವು ಪೃಥ್ವಿ ಪರಿಸ್ಥಿತಿಗಳಲ್ಲಿ ಕಾರ್ಯ ಮಾಡುವಷ್ಟು ಇನ್ನೂ ದಟ್ಟವಾಗಿಲ್ಲ" ಎಂದೂ ಅವರು ನುಡಿದಿದ್ದಾರೆ. ಮಾತೆಯವರು, ಈ ಪ್ರಭಾ ಶರೀರವು ದಟ್ಟವಾಗಿ ಪೃಥ್ವಿ ಗುಣಗಳಿಗೆ ಹೊಂದಿಕೊಳ್ಳುವಂತಾದ ಕ್ಷಣ ಮಾತೆಯವರು ಆ ಶರೀರದಲ್ಲಿ ಕಂಡೂ ಕಾಣದೆಯೊ, ಲೀನವಾಗುವುದು ನಿಶ್ಚಿತವೆಂದು ಅವರಿಗೆ ತಿಳಿದಿದ್ದಿತು.

ನವೆಂಬರ್ 17ರಂದು ಸಂಜೆ 7.25ಕ್ಕೆ ಮಾತೆಯವರು ಈ ಭೌತಿಕ ಶರೀರದಿಂದ ಮುಕ್ತರಾದರು. ಮಾತೆಯವರು ಹೃದಯಸ್ತಂಭನದಿಂದ ಮೃತರಾದರು ಎಂದು ವೈದ್ಯಕೀಯ ನಂಬುಗೆಯಾದರೂ ಶ್ರೀ ಮಾಧವ ಪಂಡಿತ ಅವರು, ಮಾತೆಯವರು ದಿವ್ಯ ದೇಹಧಾರಣೆಗಾಗಿಯೇ ಈ ಮೃಣ್ಮಯ ಶರೀರದಿಂದ ಮುಕ್ತರಾಗಿದ್ದಾರೆ ಎಂದೇ ನಂಬುತ್ತಾರೆ. ಪೂರ್ವ ಸಂಕಲ್ಪದಂತೆಯೇ ಮಾತೆಯವರು ಪ್ರಭಾಶರೀರವನ್ನು ಪ್ರವೇಶಿಸಿದ್ದಾರೆ. ಹೀಗೆ ಪ್ರವೇಶಿಸುವುದಕ್ಕಾಗಿ ಸಕಲ ಸನ್ನಾಹವೂ ಪೂರ್ತಿಯಾಗಿದ್ದಿರಲೇ

[26ನೇ ಪುಟ ನೋಡಿ]

# ಶ್ರೀ ಶರಣ ಬಸವೇಶ್ವರರು

— ವಸಂತಕುಷ್ಟಗಿ

[ಹಿಂದಿನ ಸಂಚಿಕೆಯಿಂದ]

ರಾಮಜಿಯು ಶಿಷ್ಯನಾಗಿ ಬಂದು ದಾಸೋಹವನ್ನು ಸೇರಿದ ಕೆಲವು ದಿನಗಳಲ್ಲಿಯೇ ಶರಣರ ಅನುಭಾವ ಜೀವನಕ್ಕೆ ಸಂಸಾರದ ತೊಡಕು ಬೇಡವೆಂದು ಶಿವನು ಅವರ ಸತಿಸುತರನ್ನು ತನ್ನ ಸಾನ್ನಿಧ್ಯಕ್ಕೆ ಕರೆದುಕೊಂಡು

> ಶರಣರ ಲೀಲೆ ಅದ್ಭುತವೇ ಸರಿ. ಬೇಡಿದವರಿಗೆ ಬೇಡಿದ್ದನ್ನು ನೀಡಿ ಲೋಕೋದ್ಧಾರಗೈದ ಬಗೆ ವರ್ಣನಾತೀತ. ಅವರು ತೋರಿದ ಪವಾಡಗಳು ವೈವಿಧ್ಯಮಯವಾಗಿವೆ.

ಹೋದನು. ಈ ಘಟನೆಯು ಅವರ ಮನಸ್ಸಿನ ಮೇಲೆ ಬಹಳ ಪರಿಣಾಮವನ್ನು ಉಂಟು ಮಾಡಿರಬೇಕು. ಇಂತಹ ಸ್ಥಿತಿಯಲ್ಲಿ ಶರಣರು ತಮ್ಮ ಮನಃ ಶಾಂತಿಗಾಗಿ ಕಲ್ಯಾಣವೇ ಗತಿಯೆಂದು,

**"ಲೋಕಕ್ಕೆ ಹೊಸತತ್ವ ಹೊಸಜ್ಞಾನ ನೀಡಿರುವ**
**ಬಸವ ಕಲ್ಯಾಣವನು ಕಾಂಬತನಕ**
**ಬೆಜ್ಜೆ ಬೆಜ್ಜೆಯು ಬೆಜ್ಜೆ ಬಸವಣ್ಣ ಬಸವೇಶ**
**ಎಂದೆನುತ ಮುನ್ನಡೆದ ಧೀರ ಭಕ್ತ"**

ಇತ್ತ ಅರಳಗುಂಡಿಗೆಯು ಅವರಿಲ್ಲದೆ ಭಣ ಭಣವೆಂದಿತು.

ಈ ಕಡೆಗೆ ದಾರಿಯಲ್ಲಿ ಶರಣರು ಮೆಟ್ಟಿದ ಧರೆ ಪಾವನವಾಯಿತು. ಅವರನ್ನು ಕಂಡ ಜನರ ಕಣ್ಮನಗಳು ಪಾವನವಾದವು. ಅವರು ಮುಟ್ಟಿದುದೆಲ್ಲ ಶಿವ ಕಾರುಣ್ಯವಾಯಿತು. ಹರವಾಳದ ಹತ್ತಿರ ಭೀಮಾನದಿಗೆ ಪ್ರವಾಹ ಬಂದಾಗ ಶರಣರೂ ಹಾಗೂ ರಾಮಜಿ ಕಂಬಳಿಯ ಮೇಲೆ ಕುಳಿತು ನದಿಯನ್ನು ದಾಟಿದರು. ಬಸವಾ ಪಟ್ಟಣ್ಣ, ಕೋಬಾಳ ಮೊದಲಾದ ಗ್ರಾಮಗಳಿಗೆ ಹೋಗಿ ಆ ನೆಲವನ್ನು ಪುನೀತಗೊಳಿಸಿ ಅವರಾದಿಗೆ ಬಂದರು. ಆ ಊರಿನ ಗೌಡನ ಮನೆಯಲ್ಲಿ ದಾಸೋಹ ನಡೆಯಿತು. ಅಲ್ಲಿ ದಾಸೋಹ ನಡೆದಾಗ ಒಂದು ದಿವಸ ಉರವಲು ಕಡಮೆ ಬಿದ್ದಾಗ ಮನೆಯನ್ನೇ ಬಿಚ್ಚಿಸಿ ಆ ಗೌಡನು ಅಂದು ಉರುವಲು ಒದಗಿಸಿಕೊಟ್ಟನು. ಅಂದಿನಿಂದ ಆ ಮನೆಗೆ 'ದಾಸೋಹದ ಮನೆ'ಯೆಂಬ ಹೆಸರು ಬಂದಿತು. ಗೌಡನ ಔದಾರ್ಯವು ಅವನಿಗೆ ಕೀರ್ತಿಯನ್ನೂ ಶರಣರ ಅನುಗ್ರಹವನ್ನೂ ತಂದಿತು. ಅಷ್ಟರಲ್ಲಿ ಹೋಗಿ ಬರಬಿದ್ದು ಜನರು ತತ್ತರಿಸಿ ಹೋದರು. ಬಹಳ ಜಾಗ್ರತವಾಗಿ ಕಲ್ಯಾಣವನ್ನು ಸೇರಬೇಕಾಗಿದ್ದ ಶರಣರು ಬರಗಾಲವು ಬಿಡಾಗಗುವವರೆಗೂ ಪರ್ವತಾಬಾದಿನಲ್ಲಿ ನಿಲ್ಲಬೇಕಾಯಿತು. ಅಲ್ಲಿ ದೊಡ್ಡ ಪ್ರಮಾಣದಲ್ಲಿ ದಾಸೋಹ ನಡೆಯುತ್ತಿತ್ತು. ಶರಣರು ಲಕ್ಷಾಂತರ ಸಂತ್ರಸ್ತ ಜನರಿಗೆ ಪ್ರಸಾದ ನೀಡಿ ಅವರ ಪ್ರಾಣಗಳನ್ನು ಉಳಿಸಿ ಸಂಸಾರ ರಕ್ಷಕರಾದರು; ಅಷ್ಟೇ ಅಲ್ಲ ಆ ಸಂಧರ್ಭದಲ್ಲಿಯೂ ಮುಂದೆಯೂ ಅವರೇ ಅಕ್ಷಯ ಪಾತ್ರೆಯಾದರು. ಈ ಬಗೆಯ ಜನತಾ ಸೇವೆಯ ಯಜ್ಞ ನಡೆದಾಗ ಕಲಬುರಗಿಯ ದೊಡ್ಡಪ್ಪ ಗೌಡರೂ ಅಲ್ಲಿಗೆ ಬಂದು ಶರಣರ ವ್ಯಕ್ತಿತ್ವದ ಮಹತಿಯನ್ನು ಕಂಡು ಮುಗ್ಧರಾಗಿದ್ದರು. ಶರಣರನ್ನು ಕಲಬುರಗಿಗೆ ಬರಮಾಡಿಕೊಳ್ಳಬೇಕೆಂಬ ಭಾವನೆಯೂ ಉತ್ಕಟವಾಗಿ ಅವರಲ್ಲಿ ಮೂಡಿ ಬಂದಿತ್ತು.

ಶರಣರ ಸಾತ್ವಿಕ ಶಕ್ತಿಯ ಪ್ರಭಾವದಿಂದ ಈಶ್ವರನು ಕಣ್ಣು ತೆರೆದ ಕೂಡಲೇ ಬಂದ ಬರಗಾಲವು ಬೇಗನೇ ಅಡಗಿ ಹೋಯಿತು. ತತ್‌ಕ್ಷಣ ಶರಣರ ಮನೋಭಿತ್ತಿಯ ಮೇಲೆ ಕಲ್ಯಾಣದ ಚಿತ್ರವು ಪುನಃ ಅಲೆ ಅಲೆಯಾಗಿ

ತೇಲಿ ಬಂದಿತು ಅದೇ ಭಾವನೆಯಲ್ಲಿ ಅತ್ಯಂತ ಉಲ್ಲಾಸದಿಂದ ಕಲಬುರಗಿಯವರೆಗೆ ಅವರು ಬಂದರು. ಅಲ್ಲಿ ಮೊದಲೇ ಅಪಾರವಾದ ಗೌರವದ ಸ್ಥಾನವನ್ನು ಶರಣರಿಗೆ ಎಡೆಮಾಡಿದ್ದ ಬ್ರಹ್ಮಪುರದ ದೊಡ್ಡಪ್ಪಗೌಡರು ಹಾಗೂ ಅವರ ಧರ್ಮಪತ್ನಿ ನೀಲಮ್ಮನವರ ಶ್ರದ್ಧಾವಿಶ್ವಾಸಗಳು ಅವರನ್ನು ಕಲಬುರಗಿಯಲ್ಲಿಯೇ ನಿಲ್ಲಿಸಿ ಬಿಟ್ಟವು. ಆ ದಂಪತಿಗಳು ಅವರನ್ನು ಅತ್ಯಂತ ಭಯ ಭಕ್ತಿ ಗೌರವಗಳಿಂದ ನೋಡಿಕೊಳ್ಳ ತೊಡಗಿದರು. ಶರಣರು ನಿಂತ ನೆಲೆಯೇ ಕಲ್ಯಾಣವಾಗಿ ಬೆಳಗಿತು. ಕಲಬುರಗಿಯೇ ಶರಣರ ಮಹಿಮಾ ಪ್ರಭಾವವು ದಿವಸ ದಿವಸಕ್ಕೆ ಬೆಳೆದು ಆಸ್ತಿಕರ ಸೌಭಾಗ್ಯವಾಗತೊಡಗಿತು. ಶರಣಬಸವೇಶ್ವರರ ಕರುಣೆಯ ಕಡಲಿನಲ್ಲಿ ಕಲಬುರಗಿಗೆ ಬಂದ ಜನರು ಸ್ತೋಮ ಸ್ತೋಮವಾಗಿ ನಿಂದು ಅಲ್ಲಿ ಮಿಂದು ಪುನೀತರಾಗಿ ಜೀವನದಲ್ಲಿ ದೊಡ್ಡ ಗೌರವವನ್ನು ತಾಳತೊಡಗಿದರು. ಹೀಗೆ ಕಲಬುರಗಿಯೇ ಶರಣರ ಕೃಪೆಯಿಂದ ಕಲ್ಯಾಣವಾಯಿತು. ವಿಶ್ವಕಲ್ಯಾಣದ ಕಾರ್ಯವು ಇಲ್ಲಿಂದಲೇ ನೆರವೇರತೊಡಗಿದಾಗ ಶರಣರು ಕಲಬುರಗಿಯನ್ನು ಬಿಟ್ಟು ಕದಲಿಲ್ಲ. ಇದು ಕಲಬುರಗಿಯ ಘನತೆಗೆ ಕಳಶವಿಟ್ಟಂತೆ ಆಯಿತು. ಕಲಬುರಗಿಯು ಹೀಗೆ ಕಲ್ಯಾಣವಾದಾಗ ಅಲ್ಲಿಯ ಶಕ್ತಿ ಕೇಂದ್ರ ಶರಣಬಸವೇಶ್ವರರು. ಹಾಗೂ ಅವರೇ ಎರಡನೆಯ ಬಸವೇಶ್ವರರೆಂದು ಕೀರ್ತಿ ಪಡೆದುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಅರಳ ಗುಂಡಿಗೆಯಲ್ಲಿ ಕುಡಿಯಾಗಿ ಹಬ್ಬಿದ ಶರಣರು ಕಲಬುರಗಿಯಲ್ಲಿ ಇಡಿಯಾಗಿ ತಮ್ಮ ಮಹೋನ್ನತ ವ್ಯಕ್ತಿತ್ವವನ್ನು ಶ್ರೀ ಸಾಮಾನ್ಯರಿಗೆ ತೋರಿಸಿ ಅವರನ್ನು ಸದಾಚಾರ ನಿಷ್ಠರನ್ನಾಗಿ ಮಾರ್ಪಡಿಸಿದರು. ಸರಳ ಸ್ವಭಾವ, ಶೀಲವಂತ ಆಚಾರ, ಪರೋಪಕಾರ ಬುದ್ಧಿ, ದೀನದಲಿತರಲ್ಲಿ ಅನುಕಂಪ ಪ್ರವೃತ್ತಿ-ಇವು ಬಡಬಗ್ಗರ ಕಷ್ಟ ಪರಿಹಾರಕ್ಕೆ ಕಾರಣೀಭೂತವಾದುವು. ಹಾಗೆಯೇ ಶ್ರೀ ಸಾಮಾನ್ಯರ ರಸಮಯ ಜೀವನಕ್ಕೆ ಚೇತನಾ ಸ್ವರೂಪವಾದುವು. ಶರಣರ ವಾಣಿಯು ಪ್ರಾಸಾದಿಕ ವಾಣಿಯಾಗಿ, ನುಡಿದುದಲ್ಲ ಮಾಣಿಕ್ಯವಾಗ ತೊಡಗಿತು. ಆ ಸಿದ್ಧಿಯಿಂದಲೇ ಬಡವರ ದೀನದಲಿತರ ಉದ್ಧಾರವಾಯಿತು. ಅಷ್ಟೇ ಅಲ್ಲ ಮಕ್ಕಳಿಲ್ಲದ ಸಂಸಾರಿಗಳಿಗೆ ತಮ್ಮ ಆಶೀರ್ವಾದಗಳ ಬಲದಿಂದ ಉತ್ಪತ್ತಿಯನ್ನು ಶುಭ ಹಸ್ತಗಳಿಂದ ಪ್ರಸಾದವಾಗಿತ್ತು, ಹರಸಿ, ಮಕ್ಕಳೆಂಬ ಗಿಳಿ ಕೋಗಿಲೆ, ಅಳಿ, ಮಂದಾರಗಳನ್ನು ಕರುಣಿಸುತ್ತಿದ್ದರು. ಈ ಮಹಿಮೆಯು ಇಡೀ ನಾಡನ್ನೆಲ್ಲ ಆಕರ್ಷಿಸಿತು ಅಷ್ಟೇ ಅಲ್ಲ ಶರಣರು ಅನುಕಂಪದ ಮೂರ್ತಿಯೆಂದೂ, ಕರುಣೆಯ ಕಡಲೆಂದೂ, ವಾಕ್‌ಸಿದ್ಧಿಯ ಪವಾಡ ಪುರುಷರೆಂದೂ ಖ್ಯಾತಿಯನ್ನು ಪಡೆದರು. ಹೀಗೆ ಅವರು ಮೆರೆದ ಪವಾಡಗಳನ್ನು ತೋರಿದ ಲೀಲೆಗಳನ್ನು ಬೇಕಾದಷ್ಟು ಟಿಪ್ಪಣಿ ಮಾಡಬಹುದು. ಆದರೆ ಇಲ್ಲಿ ಕೆಲವನ್ನು ಮಾತ್ರ ಸಂಗ್ರಹಿಸಿ ಕೆಳಗೆ ವಿವರಿಸಲಾಗಿದೆ.

## ಪವಾಡಗಳು

೧. ಜಂಗಮ ಸೇವೆಯನ್ನು ಶರಣರು ಬಹಳ ಮಹತ್ವದ್ದೆಂದು ಬಗೆಯುತ್ತಿದ್ದರು. ಆ ಘನ ಕಾರ್ಯದಲ್ಲಿ ಕೂದಲೆಳೆ ಕೊಂಕಿದರೂ ಅವರಿಗೆ ಕೋಪವು ವಿಪರೀತ ಬರುತ್ತಿತ್ತು. ಒಂದು ಸಲ ಶರಣರ ಧರ್ಮಪತ್ನಿಯವರಿಗೆ ಜಂಗಮ ಸೇವೆಯಲ್ಲಿ ಸೌಕರ್ಯಗಳನ್ನು ಒದಗಿಸಿ ಕೊಡುವಲ್ಲಿ ಕಿಂಚಿತ್ ತಡವಾಯಿತು. ಅದರಿಂದ ಕೋಪಗೊಂಡ ಶರಣ ಬಸವೇಶ್ವರರು ತಮ್ಮ ಮಡದಿಗೆ ಕಾರಣವನ್ನು ಕೇಳಿದರು. ತಾನು ಗರ್ಭವತಿಯಾಗಿರುವದರಿಂದ ಕೆಲಸದಲ್ಲಿ ಸ್ವಲ್ಪ ಆಲಸ್ಯ ಬಂದಿದೆಯೆಂದರೆ ಶರಣರಿಗೆ ಸಮಾಧಾನವಾಗಲಿಲ್ಲ. ಅದಕ್ಕೆ ಅವರು, "ಹೀಗಾದರೆ ನೀನು ಹಡೆಯುವುದೇ ಬೇಡ"ಎಂದು ಹಿಂದು ಮುಂದು ನೋಡದೆ ನುಡಿದು ಬಿಟ್ಟರು. ಆ ಪ್ರಯುಕ್ತ ಸುಮಾರು ೨೧ ತಿಂಗಳವರೆಗೆ ಆ ತಾಯಿ ಗರ್ಭಧಾರಣ ಮಾಡಿಕೊಂಡೇ ಇರಬೇಕಾಯಿತು. ಶಿವನ ಪ್ರೇರಣೆಯೇ ಮುಂದೆ ಈ ಸಮಸ್ಯೆಯನ್ನು ಬಗೆಹರಿಸಿತು. ಶರಣರ ಸಿಟ್ಟು ಇಳಿದು ಮಗನನ್ನು ಪಡೆಯುವಂತಾಯಿತು. ಹೀಗಿದೆ ಶರಣರ ಜಂಗಮ ಸೇವಾ ಶ್ರದ್ಧೆ ಹಾಗೂ ಶರಣರ ಮಾತಿನ ಮೌಲ್ಯ.

೨. ಶರಣರು ಅವರಾದಿಯ ದಂಡರಾಯನ ಆಶ್ರಮದಲ್ಲಿರುವಾಗ ಹೈದ್ರಾಬಾದಿನಿಂದ ಜೇದಾಡನೆಂಬ ದಳಪತಿಯು ದಂಡೆತ್ತಿ ಬರುವನೆಂಬ ಸಮಾಚಾರವು ಬಂದಿತು ದಂಡರಾಯನು ಹೌಹಾರಿ ಹೋದ. ಶರಣರು ಅವನಿಗೆ ಅಭಯ ಹಸ್ತನೀಡಿ ತಮ್ಮ ಅಮೃತ ಕರಕಮಲಗಳಿಂದ

ಐದು ಗೋಧಿ ರೊಟ್ಟಿ ಕಿರಿ ಮಗಿ ಗಿಣ್ಣವನ್ನು ಆತನಿಗೆ ಕೊಟ್ಟು ಇದನ್ನು ದಂಡೆತ್ತಿ ಆ ದಳಪತಿ ಬಂದಕೂಡಲೇ ಅವರಿಗೆಲ್ಲ ಕೊಡಲು ಅಪ್ಪಣೆ ಕೊಡಿಸಿದರು. ಆ ಪರಿಣಾಮವಾಗಿ ಬೇದಾಡ ಮೊದಲಾದವರು ಶರಣರು ನೀಡಿದ ಪ್ರಸಾದದ ಮಹಿಮೆಯಿಂದ ಶತ್ರುವಾಗಿ ಬಂದವರು ಮಿತ್ರರಾದರು. ಶರಣರ ಭಕ್ತರಾದರು. ಈ ಘಟನೆಯು ಶರಣರು ಶರಣು ಬಂದವರನ್ನು ಕುತ್ತಿನಿಂದ, ಹಿತಕರ ವಾತಾವರಣ ನಿರ್ಮಾಣ ಮಾಡಿ, ಪಾರು ಮಾಡುವ ಸೊಗಸಾದ ಮಾರ್ಗವನ್ನು ಸೂಚಿಸುತ್ತದೆ.

೩. ಬೆಳಗುಂಪಿಯ ಬಳಿ ಒಬ್ಬ ಬೇಡರ ನಾಯಕನು ಕಿವಿ ನೋವಿನಿಂದ ಬಹಳ ಒದ್ದಾಡುತ್ತಿದ್ದ. ಬೇಸತ್ತು ಅವನು ಪ್ರಾಣ ಹತ್ಯೆಗೆ ಸಿದ್ಧನಾಗಿದ್ದನು. ಶರಣರ ಕೃಪಾದೃಷ್ಟಿಯು ಅವನ ಮೇಲೆ ಬಿದ್ದಿತು. ಕಿವಿನೋವು ಕಡಿಮೆಯಾಯಿತು. ಆ ನಾಯಕನು ಮೊದಲು ಶರಣರಿಗೆ ತಾನು ವಚನ ಕೊಟ್ಟಂತೆ ತಾನು ಗಳಿಸಿದ ಸಂಪತ್ತಿನಲ್ಲಿ ಅರ್ಧಭಾಗವನ್ನು ಬಹಳ ಉತ್ಸಾಹದಿಂದ ಬೇಗನೇ ತಂದು ಸಲ್ಲಿಸಬೇಕೆಂದು ಮನೆಗೆ ಬಂದನು. ಆದರೆ ಮನೆಯಲ್ಲಿ ಎಲ್ಲರೂ ಈತನ ವಿಚಾರವನ್ನು ವಿರೋಧಿಸಿದರು. ಶರಣರಿಗೆ ಈ ವಿಷಯ ತಿಳಿದಾಗ ಆ ನಾಯಕನ ಮನೆಯ ಜನರಿಗೆಲ್ಲ ತಾಳಲಸಾಧ್ಯವಾದ ಕಿವಿನೋವು ಆರಂಭವಾಯಿತು. ಆಗ ನಿರ್ವಾಹವಿಲ್ಲದೆ ಪಶ್ಚಾತ್ತಾಪದಿಂದ ಶರಣರಿಗೆ ಅವರೆಲ್ಲ ಕೂಡಿ ಶರಣು ಬಂದು ಅತ್ಯಂತ ಭಯ ಭಕ್ತಿಗಳಿಂದ ತಮ್ಮ ಸಂಪತ್ತಿನ ಅರ್ಧ ಭಾಗವನ್ನು ಶರಣರಿಗೆ ಸಮರ್ಪಿಸಿದರು. ತತ್‌ಕ್ಷಣವೇ ಕಿವಿ ನೋವು ಅವರೆಲ್ಲರಿಗೂ ಕಡಮೆಯಾಗಿ ಶಾಂತಿ ಸಮಾಧಾನಗಳಿಂದ ಅವರು ಮುಂದೆ ಜೀವನ ಸಾಗಿಸಿದರು. ಹೀಗೆ ಈ ಘಟನೆಯು ಶರಣರಿಗೆ ಮೋಸ ಮಾಡಿದರೆ ಅವರು ಬಿಡುವವರಲ್ಲ, ಅವರು ಮೋಸ ಮಾಡಿದವರಿಗೆ ಬುದ್ಧಿಗಲಿಸಿ ಒಳ್ಳೆಯ ಜೀವನವನ್ನು ನೀಡುತ್ತಾರೆಂಬುದಕ್ಕೆ ನಿದರ್ಶನವಾಗಿದೆ.

೪. ಶರಣ ಬಸವೇಶ್ವರರು ಒಂದರ್ಥದಲ್ಲಿ ಕಣ್ಣುಗಳನ್ನು ಕೊಟ್ಟ ಕಣ್ಣಪ್ಪರೇ ಸರಿ . ಏಕೆಂದರೆ ಹುಟ್ಟು ಕುರುಡನಾದ ರಾಜಶೇಖರನಿಗೆ ಆತನ ಅಕ್ಕನಾದ ಗಂಗಾದೇವಿಯು ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿ ಮನೆನಿಲ್ಲಿಸಬೇಕೆಂದು ಊರವರೆಲ್ಲ ತಿಳಿಸಿ ಹೇಳಿದರೂ ಗಂಗಾದೇವಿಗೆ ಕುರುಡನಿಗೆ ಮಗಳನ್ನು ಕೊಡಲು ಒಪ್ಪಲಿಲ್ಲ. ಈ ವಿಷಯವು ಶರಣರ ಸಮ್ಮುಖಕ್ಕೂ ಬಂದಾಗ ಅವರು ಊರವರ ಸಾಮಾನ್ಯ ಅಭಿಪ್ರಾಯವನ್ನೇ ಎತ್ತಿ ಹಿಡಿದರು. ಆದರೆ ಆಗಲೂ ಗಂಗಾದೇವಿಯು ಮಗಳನ್ನು ತಮ್ಮನಿಗೆ ಕೊಡಲು ಒಪ್ಪಲಿಲ್ಲ. ಆಗ ಶರಣರ ಮಹಿಮೆಯಿಂದ ಅವಳ ಮಗಳ ಕಣ್ಣುಗಳೇ ಹೋಗಿಬಿಟ್ಟವು. ಈ ಚಮತ್ಕಾರ ನೋಡಿ ಗಂಗಾದೇವಿಗೆ ಅರಿವು ಮೂಡಿ ಶರಣರ ಹತ್ತಿರ ಬಂದು ಶರಣಾದಳು. ಕನಿಕರಗೊಂಡ ಶರಣರು ಆ ಇಬ್ಬರು ಕುರುಡರಿಗೆ ಕಣ್ಣುಗಳನ್ನಿತ್ತು ಅವರ ಸಂಸಾರದಲ್ಲಿ ಬೆಳಕು ಮೂಡಿಸಿದರು.

೫. ಭೂತ ಪಿಶಾಚಿಗಳ ಭ್ರಮೆಯಿಂದ ಬಳಲುತ್ತಿದ್ದ ದುರ್ದೈವಿಗಳ ಆ ಭ್ರಮೆಯನ್ನು ದೂರಮಾಡಿ ನಿರ್ಭೀತಿಯ ಜೀವನವನ್ನು ಕರುಣಿಸುವಲ್ಲಿಯೂ ಶರಣರು ಹಿಂದುಳಿಯಲಿಲ್ಲ. ಒಮ್ಮೆ ಒಬ್ಬ ಚಿತ್ರಕಾರನ ಪತ್ನಿಗೆ ಈ ತರಹದ ಭ್ರಮೆಯುಂಟಾಗಿತ್ತು. ಹೀಗಾಗಿ ಅವಳ ಹತ್ತಿರ ಯಾರೂ ಸುಳಿಯುತ್ತಿರಲಿಲ್ಲ. ಕೊನೆಗೆ ಆ ಚಿತ್ರಕಾರನು ಅವಳನ್ನು ಕರೆದುಕೊಂಡು ಬಂದು ಶರಣರ ಪಾದಧೂಳಿಗೆ ಹಾಕಿದಾಗ ಅವಳಿಗೆ ಬಡಿದುಕೊಂಡಿದ್ದ ಭೂತವು ಪತ್ತೆ ಇಲ್ಲದೆ ಓಡಿಹೋಯಿತು. ಇಂತಹ ಸುಂದರ ಕಾರ್ಯ ಶರಣಶಕ್ತಿ ಸಂಜೀವಿನಿಯಾಗಿ ಇಳೆಯನ್ನು ಪಾದ್ಯಗೊಳಿಸಿದ ಘಟನೆಗಳು ಸಾವಿರಾರು.

೬. "ಸತ್ತವರನ್ನು ಬದುಕಿಸು ಬ್ರಹ್ಮ ಶರಣ ಬಸವೇಶ್ವರರು" ಎಂಬ ಖ್ಯಾತಿಯೂ ಕಲಬುರಗಿಯ ಶರಣರಿಗೆ ಬಂದಿತ್ತು. ಕಲಬುರಗಿಯಲ್ಲಿ ಒಮ್ಮೆ ಒಬ್ಬ ದುರ್ದೈವಿ ಹೆಂಗಸು ಗಂಡನನ್ನು ಕಳೆದುಕೊಂಡು ಹೆಣದ ಹಿಂದೆ ಸ್ಮಶಾನಯಾತ್ರೆಗೆ ಹೊರಟಾಗ ಶರಣರ ಆಗಮನವು ಯೋಗಾಯೋಗದಿಂದ ಅಲ್ಲಿಗೆ ಆಯಿತು. ಆ ಅಬಲೆಯು ಶರಣರಿಗೆ ಅನನ್ಯ ಭಕ್ತಿಯಿಂದ ನಮಸ್ಕಾರ ಮಾಡಿದಳು. ಅದಕ್ಕೆ ಅವರು ಪ್ರತಿಯಾಗಿ "ಮಕ್ಕಳ ತಾಯಿಯಾಗು" ಎಂದು ಹರಕೆ ನೀಡಿದರು. ಅಕ್ಕ ಪಕ್ಕದ ಜನರು ಶರಣರಿಗೆ ವಸ್ತುಸ್ಥಿತಿಯನ್ನು ನಿವೇದಿಸಿಕೊಂಡು ಈ ಹರಕೆಯು ಕೈಗೂಡೀತೆ? ಎಂದು ಪ್ರಶ್ನೆ ಮಾಡಿದರು. ಆಗ ಕರುಣಾಮರಾದ ಶರಣರು ಹೆಣವನ್ನು ಸ್ಪರ್ಶಿಸಿದರೂ ಆತ ಮತ್ತೆ ಬದುಕಿದನು." ಆಗ ಜನರೆಲ್ಲ ಶರಣರನ್ನು ಈ ಇಳೆಯೊಳಗೆ ಈತನೆರಡನೆಯ ಶಿವನೆಂದು ಹಾಡಿ ಹರಸತೊಡಗಿದರು.

ಇಂತಹ ಪವಾಡಗಳನ್ನು ಕೇಳಿ ಕೆಲವು ಕುಹಕಿಗಳು ಶರಣರನ್ನು ಕೆಣಕಿ ಪರೀಕ್ಷಿಸಲು ಬಂದುದುಂಟು. ಆದರೆ ಬಂದವರ ಕುಹಕವನ್ನು ಕಂಡ ಶರಣರು ಅವರಿಗೆ ಅಂಥಹದೇ ಅನುಗ್ರಹವನ್ನು ಗೈದರು. ಮತ್ತೆ ಅಂತಹವರ ಬಂಧು ಬಳಗದವರ ದುಃಖವನ್ನು ಕಂಡು ಶರಣರು ಕನಿಕರಗೊಂಡು ಅಂತಹವರಿಗೆ ಬಾಳ್ವೆಯನ್ನು ನೀಡಿದುದು ಉಂಟು ಇಂತಹ ಘಟನೆಗೆ ನರಹರಿ ಎಂಬ ಗೃಹಸ್ಥನು ಸಿಕ್ಕಿಬಿನ್ನಾಗಿ ಪಾಠಕಲಿತು ಶರಣರಿಂದ ಪಾವನನಾದನೆಂಬುದನ್ನು ಇಲ್ಲಿ ನೆನೆಸಿಕೊಳ್ಳಬಹುದು.

೭. ಅನನ್ಯ ಭಕ್ತಿಯಿಂದ ಮೊರೆಹೊಕ್ಕು ಮಕ್ಕಳಿಗಾಗಿ ಹಂಬಲಿಸುವವರಿಗೆ ಮಕ್ಕಳನ್ನು ಕರುಣಿಸಿ ಮನೆ ಮನೆಗಳಲ್ಲಿ ವಂಶದ ನಂದಾದೀಪವನ್ನು ಬೆಳಗಿಸಿದ್ದಾರೆ ಈ ಶರಣರು. ಇಂತಹ ಅನೇಕ ನಿದರ್ಶನಗಳಿವೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಸಂಕ್ಷಿಪ್ತವಾಗಿ ಕೆಳಗೆ ವಿವರಿಸಲು ಪ್ರಯತ್ನಿಸಲಾಗಿದೆ.

(ಅ) ಇಂದು ಕಲಬುರುಗಿಯಲ್ಲಿ ಶರಣ ಪ್ರಸಾದವಾಗಿ, ಅರಿವಿನ ತಿರುಳಿನ ನಂದಾದೀಪವಾಗಿ ಪರಿಶೋಭಿಸುತ್ತಿರುವ ಶ್ರೀ ಶರಣ ಬಸವೇಶ್ವರರು ಮಂದಿರ ಮತ್ತು ಸಂಸ್ಥಾನಗಳು ಕರುಣಾಕರ ಶರಣ ಬಸವೇಶ್ವರರ ಗೋವತ್ತ ಲೀಲೆಯ ಶ್ರೀ ವಿಭೂತಿಯೆಂದು ತಿಳಿಯಬೇಕು ಏಕೆಂದರೆ ಕಲಬುರುಗಿಯಲ್ಲಿ ಈಗಿರುವ ಆ ಪವಿತ್ರ ಸ್ಥಳವು ಹಿಂದೆ ಶರಣ ಬಸವೇಶ್ವರರ ಅನುಗ್ರಹಕ್ಕೆ ಪಾತ್ರರಾದ ಒಬ್ಬ ಶಿಷ್ಯರಿಗೆ ಸಂಬಂಧ ಪಟ್ಟದ್ದು. ಆ ಶಿಷ್ಯ ಗೃಹಸ್ಥರು ಶರಣರ ಅಂತಃಕರುಣೆಯ ಪ್ರಸಾದಕ್ಕೆ ಮಾರುಹೋಗಿ ಬಹು ಭಕ್ತಿ ವಿಶ್ವಾಸಗಳಿಂದ ಆ ಸ್ಥಳವನ್ನು ಭಕ್ತಿಯ ಕಾಣ್ಕೆಯಾಗಿ ಸಲ್ಲಿಸಿದರೆಂದು ತಿಳಿದು ಬರುತ್ತದೆ. ಆ ಶಿಷ್ಯ ಗೃಹಸ್ಥರು ಯಾರು ಎಂದರೆ ಇಂದು ಬ್ರಹ್ಮಪುರದಲ್ಲಿ ಶರಣರ ಆಸ್ಥಾನಕ್ಕೆ ಹತ್ತಿಕೊಂಡೇ ಇರುವ ದೇಶಮುಖರ ವಂಶದವರು. ಅವರ ಹೆಸರು ಸುಂದರದೇವ ಎಂದು. ಆ ದೇಶ ಮುಖರ ಧರ್ಮ ಪತ್ನಿಯು ಸದಾ ರೋಗರುಜನಗಳಿಂದ ಬಳಲುತ್ತಿದ್ದರು. ಇದಲ್ಲದೆ ಅವರಿಗೆ ಮಕ್ಕಳಿಲ್ಲದ ಕೊರಗೂ ಕಾಡುತ್ತಿತ್ತು. ಅಷ್ಟರಲ್ಲಿ ಕಲಬುರುಗಿಗೆ ಬಂದಿದ್ದ ಶರಣರ ಮಹಿಮೆಯನ್ನು ಅವರು ಕೇಳಿ ಶರಣರ ಸನ್ನಿಧಿಗೆ ಶರಣು ಬಂದರು. ಅನನ್ಯ ಭಕ್ತಿಯಿಂದ ಮೊರೆಯಿಟ್ಟರು. ಅವರಿಗೆ ಪ್ರಸನ್ನರಾದ ಶರಣರು ತಮಗೆ ಕಲಬುರುಗಿಯಲ್ಲಿ ಇರಲು ಸ್ಥಳವನ್ನು ಕೊಟ್ಟರೆ ಅವರ ಇಷ್ಟಾರ್ಥಗಳನ್ನು ಪೂರ್ಣಮಾಡುವುದಾಗಿ ಅಭಯ ಹಸ್ತ ನೀಡಿದರು ಆಗ ದೇಶ ಮುಖರು ಈ ಕಟ್ಟಳೆಗೆ ಸಂತೋಷದಿಂದ ಒಪ್ಪಿದರು. ಇದಾದ ಮೇಲೆ ಯೋಗ್ಯ ಕಾಲದಲ್ಲಿ ಸುಂದರ ದೇವರ ಅಭೀಷ್ಟಗಳೆಲ್ಲ ಈಡೇರಿದವು. ಅವರ ಮಡದಿಯು ರೋಗರುಜಿನಗಳಿಂದ ದೂರವಾಗಿ ಸಂತಾನ ಸಂಪತ್ತನ್ನು ಪಡೆದು ಸಂಸಾರದಲ್ಲಿ ಸಂತೋಷವನ್ನುಂಟುಮಾಡಿದರು. ಶರಣರ ತಪೋಮಹಿಮೆಗೆ ಭಕ್ತಿ ಆದರಗಳಿಂದ, ಮೊದಲೇ ಒಪ್ಪಿಕೊಂಡಂತೆ, ಶರಣರು ಕಲಬುರುಗಿಯಲ್ಲಿ ನೆಲೆಯಾಗಿ ನಿಲ್ಲಲು ತಪೋಭೂಮಿಯ ಅವರ ಆಶೀರ್ವಾದಗಳ ಪ್ರಕಾರ ಆ ದೇಶಮುಖರು ಕೊಡಮಾಡಿದರು. ಆ ಪವಿತ್ರ ಭೂಮಿಯೇ ಇಂದು ದೇಶದ ಭಕ್ತರನ್ನೆಲ್ಲಾ ಬರಮಾಡಿಕೊಂಡು ಶರಣಪ್ರಸಾದ ಶರಣ ನಂದಾದೀಪಗಳ ಮಹಿಮೆಯನ್ನು ತೋರಿಸಿ ಅನುಗ್ರಹ ಮಾಡುತ್ತಿದೆ. ಇಂದಿಗೂ ಶರಣರ ನಂದಾ ದೀಪದ ಬೆಳಕಿನಲ್ಲಿ ದಾಸೋಹ—ಪ್ರಸಾದ ದಾಸೋಹ, ಜ್ಞಾನ ಪ್ರಸಾದ ದಾಸೋಹ—ಆಧ್ಯಾತ್ಮಿಕವಾಗಿ ನಡೆದು ಬರುತ್ತಿದೆ. ಈ ಶರಣ ಕಾರುಣ್ಯದ ಪ್ರತೀಕವೆಂಬಂತೆ ಇಂದಿಗೂ ಶರಣರ ರಥೋತ್ಸವದ ಮಂಗಲ ಸಂದರ್ಭದಲ್ಲಿ ದೇಶಮುಖರ ಮನೆತನದವರು ಬಂದು ತಮ್ಮ ಬಾಬು ಸಲ್ಲಿಸುತ್ತಾರೆ. ಅವರು ಬರುವವರೆಗೂ ರಥವು ಮುಂದೆ ಸಾಗುವುದಿಲ್ಲವೆಂಬ ವಿಶ್ವಾಸವೂ ಇದೆ. ಇದು ಗುರುಕಾರುಣ್ಯದ ಶರಣ ಕಾರುಣ್ಯದ ಚಿದಾನಂದ ಜ್ಯೋತಿಯ ಪರಿಶುದ್ಧ ಪ್ರತೀಕ.

ಬ) ಬಂಜೆಯೆಂಬ ಶಬ್ದವನ್ನು ಹೊತ್ತು ತತ್ತಳಿಸಿ ಹೋದ ಒಬ್ಬ ಸಾಧ್ವಿ, ಶರಣರ ಮಹಿಮೆಯನ್ನು ಕೇಳಿ ದಾಸೋಹಕ್ಕಾಗಿ ತನ್ನ ಒಡವೆಗಳನ್ನು ಮುಡುಪು ಕಟ್ಟಿ ಮಗುವನ್ನು ಪಡೆದು ಬಂಜೆಯು ತಾಯಿಯಾಗಿ ಸಂತೋಷದಿಂದ ಕುಣಿದಾಡಿದಳು.

(ಕ) ಕಲಬುರುಗಿಯಲ್ಲಿ ಹಿಂದೆ ಬಾಪುರಾಯರ ಸೊಸೆಯು ತನ್ನ ಬಂಗಾರದ ಸರಣಿಯನ್ನು ಶರಣರ ದಾಸೋಹಕ್ಕೆ ಕಾಣ್ಕೆ ಸಲ್ಲಿಸಿ ತನ್ನ ವಂಶವನ್ನು ಬೆಳಗಿಸುವ ಕಂದನನ್ನು ಪಡೆದು ಕೃತಾರ್ಥಳಾದಳು.

— [ಮುಂದುವರೆಯುವುದು]



# ಕಾವ್ಯವಾಹಿನಿ

## ಶಾಂತಿ

ಯಾವ ಭೂಮಿಗೆ ತಾಯಿ ಎಂದೆನ್ನುತಿರುವೆವೋ
ಆ ಭೂಮಿಯೇ ಮಸಣವಾಗಿರುವುದು.
ಅದರಂತೆಯೇ ಮನವು ಆಶೆಗಳ ತಾಯಿಯದು
ಭೂಮಿಯೊಲು ಇದು ಸಹಿತ ಮಸಣವಹುದು.

ಆಶೆಗಳು ಅಳಿದಾಗ ಚಿಂತೆ ಚಿತೆಯಾಗುವುದು
ಅವುಗಳಿಗೆ ಆಗ ಶಿವ ಸಂಸ್ಕಾರವು.
ಸುಟ್ಟಾಶೆ, ಸುಡುವಾಶೆ, ಸುಡುವಂಚಿಗಿಹ ಆಶೆ-
ಗಳಿಗೆ, ಉಳಿದಾಶೆಗಳ ಚೀತ್ಕಾರವು.

ಚಿತೆಯ ಹೊಗೆಯೊಂದಿಗೀ ಚೀತ್ಕಾರ ನಭ ತುಂಬಿ
ಧುಮುಕುತಿಹ ಮಾರ್ಗವೇ ಘ್ರಾಣೇಂದ್ರಿಯ.
ಈ ಮಾರ್ಗದಿಂದಿಂತು ಹೊರಬರುವ ಗೋಚರಕೆ
ನಿಟ್ಟುಸಿರು ಎಂಬ ಪದ ನಾಮೋಸ್ವಯ.

ಮಸಣದೊಡೆಯನು ಶಿವನು ಇರಲು ಮನ ಸಂಪೂರ್ಣ
ಮಸಣವಾದರು ಅದುವೆ ದೇವ ಕಾಣ.
ಇಂತಿರಲು ಉಳಿರುವ ಆಶೆಗಳೆ ಗೈದುಬಿಡಿ
ಈ ಕ್ಷಣವೆ ನಿಮ್ಮನ್ನು ದೇವಾರ್ಪಣ.

ಆಗ ಈ ಮನವೆಂಬ ಭೂವ್ಯೋಮಪಾವರಣ
ಶಾಂತಿಯನು ಎಲ್ಲೆಡೆಗೆ ಪ್ರಕಟಿಸುವುದು.
ಅಂತರಂಗದ ಭಾವ ಕನ್ನಡಿಪ ಕಂಗಳಲಿ
ಆ ಶಾಂತಿಯೇ ಹೊರಗೆ ಬಿಂಬಿಸುವುದು,

—ಜೆ. ಪಿ. ದೈವಜ್ಞಾಚಾರ್ಯ

## ಕಿಲಾಡಿ

ದಿನ ನಿತ್ಯದ ಹೊಸಿಲು. ದಾಟಿದಂತೆಲ್ಲಾ
ಪರಿಸರದಿ ಕಂಡುಂಡ ನಾಗರೀಕತೆಯ
ನಡವಳಿಕೆಗಳ ಅಂಟಿಸಿಕೊಂಡು
ಸುಖ ಶಾಂತಿಗಾಗಿ
ಹತ್ತಿರಾದವರ ಹಾಸಿ ಹೊದೆದುಕೊಂಡು
ರಂಗೋಲಿಯ ಅಡಿಯಲ್ಲೇ
ತೂರಿ ಬರುವ ಕಿಲಾಡಿ

ಚುರುಕು ಬುದ್ಧಿಯ ಸಂತೆಯಲ್ಲಿ
ಸಮರ್ಥನೀಯ ಸಾಧನೆಗಳನ್ನು
ಸಾಧಿಸಿ ಕೋರುವ ಪೈಲ್ವಾನ.
ಬಾಳಿನ ಮನೆಯ ಬದುಕಿನ ಪಾತ್ರೆಗಳ
ತೂತುಗಳನ್ನು ಮುಚ್ಚುವ ಕಲಾಯಿಸಾಬಿ

ಕೆಡಿಸಲೋ ಬದುಕಿಸಲೋ
ಎದುರಾಗುವ ಸಮಸ್ಯಾ ರೋಗಗಳಿಗೆ
ಪರಿಹಾರದ ಚುಚ್ಚುಮದ್ದು ಕೊಡುವ ವೈದ್ಯ
ಕಷ್ಟಗಳ ಮಳೆಗೆ ನಷ್ಟಗಳ ಬಿಸಿಲಿಗೆ
ಎದೆಕೊಟ್ಟು ಎದುರಾಗುವ ಕೊಡೆ ಹಿಡುಕ.

ಶಾಂತಿ ಸಮಾಧಾನಗಳಿಂದ
ತುಣುಕುಗಳ ಕೂಡಿಸಲು
ಹದವರಿತು ಶಿದ್ದಿ ಬಡಿದು
ಕೈ ಚಳಕ ತೋರಿ
ಬೇಕಾದ್ದನ್ನೇ ಮಾಡುವ ಕಮ್ಮಾರ
ಹತ್ತಿರಾದವರ ಹಾಸಿ ಹೊದೆದುಕೊಂಡು
ರಂಗೋಲಿಯ ಅಡಿಯಲ್ಲೇ
ತೂರಿಬರುವ ಕಿಲಾಡಿ.

—ದೊಡ್ಡಬಾಣಗೆರೆ ಪ್ರಕಾಶಮೂರ್ತಿ

ವಿಜ್ಞಾನ ವಿಶ್ವ

# ಗುರು ಗ್ರಹ

ಸೌರವ್ಯೂಹದಲ್ಲೇ ಅತ್ಯಂತ ದೊಡ್ಡದಾದ ಹಾಗೂ ಅತಿ ಹೆಚ್ಚಿನ ಸಂಖ್ಯೆಯ ಉಪಗ್ರಹಗಳನ್ನು ಹೊಂದಿರುವ ಗುರು ಗ್ರಹದ ಹಿರಿಮೆ ಗರಿಮೆಗಳ ಅಧ್ಯಯನ ಚೇತೋಹಾರಿ.

— ಪ. ರಾಮಕೃಷ್ಣಶಾಸ್ತ್ರಿ.

ಭಾರತೀಯ ಪುರಾಣಗಳ ಪ್ರಕಾರ ಸಕಲ ದೇವತೆಗಳಿಗೂ ಗುರು ಅಥವಾ ಬೃಹಸ್ಪತಿಯೇ ಪುರೋಹಿತ. ಆಂಗ್ಲ ಭಾಷೆಯಲ್ಲಿ 'ಜ್ಯೂಪಿಟರ್' ಎಂದೂ 'ದ್ಯುಪಿತ'ನೆಂದೂ ಕರೆಯಲ್ಪಡುವ ಗುರುವು 'ಅಂತರಿಕ್ಷದ ಸಂರಕ್ಷಕ' ಎಂದು ಬೈಬಲ್‌ನಲ್ಲಿದೆ. ರೋಮ್‌ನ ಪುರಾಣಗಳಲ್ಲಿ ಮುಖ್ಯ ದೇವತೆಯಾದ ಗುರು ಶನಿಯ ಮಗ. ಶನಿ ತನಗೆ ಹುಟ್ಟಿದ ಮಕ್ಕಳನ್ನೆಲ್ಲಾ ತಿಂದುಬಿಡುತ್ತಿದ್ದುದರಿಂದ ಗುರು ಹುಟ್ಟಿದ ಕೂಡಲೇ ಅವನ ತಾಯಿ ರ್‍ಹಿಯಾ ಯಾರಿಗೂ ತಿಳಿಯದಂತೆ ಮಗನನ್ನು ಕಾಪಾಡಿದಳು. ಮುಂದೆ ಗುರು ಶನಿಯನ್ನು ಸೋಲಿಸಿ, ಶನಿ ತಿಂದಿದ್ದ ತನ್ನ ಸಹೋದರರನ್ನೆಲ್ಲ ಪುನರುಜ್ಜೀವಿತಗೊಳಿಸಿ ತಾನು ದೇವತೆಗಳ ಅರಸನಾಗಿ, ತನ್ನ ತಂಗಿಯಾದ ಜೂನೋ ದೇವಿಯನ್ನು ಮದುವೆಯಾದನಂತೆ. ಗುರು ಮತ್ತು ಜೂನೋರ ದಾಂಪತ್ಯದಲ್ಲಿ ಜನಿಸಿದ ಮಕ್ಕಳೇ ಕುಜ ಮತ್ತು ಬುಧ ಎಂದು ಗ್ರೀಕ್ ಪುರಾಣಗಳಲ್ಲಿದೆ. ಜಾಣತನದಲ್ಲಿ ಗುರುವನ್ನು ಮೀರಿಸಿದವರಿಲ್ಲವೆಂದು ರೋಮನರ ಪುರಾಣಗಳಲ್ಲಿದೆ.

ಸೌರವ್ಯೂಹದ ನವಗ್ರಹಗಳ ಪೈಕಿ ಐದನೆಯದಾದ ಗ್ರಹವೇ ಈ ಗುರು. ಆಕಾಶದ ಅತ್ಯಂತ ಪ್ರಕಾಶಮಾನ ಗ್ರಹಗಳಲ್ಲಿ ಶುಕ್ರನ ಅನಂತರದ ಸ್ಥಾನ ಗುರುವಿನದು. ಇವನ ಅಪೂರ್ವ ಕಾಂತಿಯನ್ನು ಕಂಡ ಪ್ರಾಚೀನ ಗ್ರೀಕರು ದೇವತೆಗಳ ಆವಾಸ ಸ್ಥಾನವಾದ ಒಲಿಂಪಸ್ ಪರ್ವತಕ್ಕೆ ಅವನೇ ಒಡೆಯನೆಂದು ಕರೆದಿದ್ದರು. ಭೂಮಿಗೆ ಗುರು ಎರಡನೆಯ ಬಹಿರ್ಗ್ರಹ.

'ಗುರು' ಎಂದರೆ ಗ್ರಹ ಸಿದ್ಧಾಂತದಲ್ಲಿ 'ದೊಡ್ಡದು' ಎಂದರ್ಥ. ಅದು ನಿಜ ಸೂರ್ಯನಿಂದ ಪೃಥ್ವಿ ೫ ಮೈಲಿಯಷ್ಟು ದೂರದಲ್ಲಿ ಅಂದರೆ ೪೮,೦೫,೦೦,೦೦೦ ಮೈಲು ದೂರದಲ್ಲಿ ಪ್ರದಕ್ಷಿಣೆ ಬರುತ್ತಿರುವ ಗುರು ಬೃಹದಾಕಾರದ ಗ್ರಹ. ಅವನ ಗಾತ್ರ ಸೂರ್ಯನ ಗಾತ್ರಕ್ಕಿಂತ ದಶಲಕ್ಷ ಅಂಶವಷ್ಟೇ ಕಡಿಮೆ. ಆತನ ಗಾತ್ರವು ೧, ೨೭೬ ಪೃಥ್ವಿಗಳಿಗೆ ಸಮಾನ. ಉಳಿದ ೮ ಗ್ರಹಗಳನ್ನು ಗುರುವಿನೊಳಗೆ ತುಂಬಿದರೆ ೨/೩ ಅಂಶ ಮಾತ್ರ ಭರ್ತಿಯಾದೀತಷ್ಟೆ!

ಸೂರ್ಯನಿಂದ ಗುರುವಿನ ಅಂತರವು ಪೃಥ್ವಿಯದಕ್ಕಿಂತ ೫. ೨ ರಷ್ಟು ಜಾಸ್ತಿ. ಗುರು ಕಕ್ಷೆಯ ಪೃಥ್ವಿಯ ಕಕ್ಷೆಗಿಂತ ೫ ಪಾಲು ದೊಡ್ಡದು. ಗುರುವಿನಲ್ಲಿ ನಿಂತು ನೋಡಿದರ ಸೂರ್ಯ ನಮಗಿಂತ ೫ ಪಾಲು ಕಿರಿದಾಗಿಯೂ, ಅವನ ಹೊರ ಮೈ ವಿಸ್ತೀರ್ಣ ೨೭ ಪಾಲು ಕಮ್ಮಿಯಾಗಿಯೂ ಕಾಣುತ್ತದೆ. ಸೂರ್ಯನಿಂದ ಗುರುವಿನ ಮೇಲೆ ಬೀಳುವ ಬೆಳಕು, ಉಷ್ಣತೆಗಳ ಪೃಥ್ವಿಗಿಂತ ಸರಾಸರಿ ೨೭ ರಷ್ಟು ಕಡಿಮೆ. ಪೃಥ್ವಿಗಿಂತ ೧೧ ಮಡಿ ಹೆಚ್ಚಾದ ವ್ಯಾಸವಿರುವ ಪರಿಧಿ ೨, ೭೪, ೩೫೭ ಮೈಲು.

ಗುರುವಿನ ಭ್ರಮಣ ವೇಗ ಅತಿ ಭಯಂಕರ. ಪೃಥ್ವಿಯು ಒಂದು ಪ್ರದಕ್ಷಿಣೆಗೆ ೨೪ ತಾಸು ತೆಗೆದುಕೊಂಡರೆ ೧೦ ತಾಸಿನಲ್ಲೇ ಆ ಕೆಲಸವನ್ನು ಪೂರೈಸುವ ಗುರುವಿನಲ್ಲಿ ಹಗಲು, ರಾತ್ರಿಗಳು ತಲಾ ಐದು ತಾಸು ಇರುತ್ತವೆ. ನಮ್ಮ ೩೬೫ ದಿವಸ, ಗುರುವಿನಲ್ಲಿ ೮೭೬ ದಿವಸ. ಗುರುವಿನ ಒಂದು ವರ್ಷದಲ್ಲಿ ೧೦, ೪೫೫ ದಿನ ಗಳಿರುತ್ತವೆ. ಇಂಥ ವೇಗವಿರುವುದರಿಂದ ಗುರುವಿನ ಸಮಭಾಜಕ ವೃತ್ತದ ವ್ಯಾಸವು ಚಪ್ಪಟೆಯಾಗಿರುವ ಧ್ರುವಗಳ ಮಧ್ಯದ ವ್ಯಾಸಕ್ಕಿಂತ ೬,೦೦೦ ಮೈಲು ಅಧಿಕಗೊಂಡಿದೆ. ಸಮಭಾಜಕವೃತ್ತದ ಅವನ ವ್ಯಾಸ ಭೂಮಿಯಲ್ಲಿ ೧೦ ರಷ್ಟು ಅಂದರೆ ೮೮,೨೦೦. ಮೈಲು,

ಭೂಮಿಯು ಸೆಕೆಂಡಿನಲ್ಲಿ ಸೂರ್ಯನಿಗೆ ೧೯ ಮೈಲು ಪ್ರದಕ್ಷಿಣೆ ಬರುತ್ತದೆ. ಆದರೆ ಕಕ್ಷಾಭ್ರಮಣ ವೇಗವು ಅತ್ಯಲ್ಪವಾಗಿರುವ ಗುರು ಇದೇ ಅವಧಿಯಲ್ಲಿ ೮ ಮೈಲು ಮಾತ್ರ ಸುತ್ತಿರುವುದರಿಂದ ನಮ್ಮಲ್ಲಿಯ ೧೨ ವರ್ಷಗಳಿಗೆ ಗುರುಗ್ರಹದಲ್ಲಿ ಒಂದು ಸಂವತ್ಸರ ಮಾತ್ರ ಆಗುತ್ತದೆ.

ಸೌರವ್ಯೂಹದ ಎಲ್ಲಾ ಗ್ರಹಗಳಲ್ಲಿರುವ ದ್ರವ್ಯ ರಾಶಿಗಿಂತ ಎರಡೂವರೆ ಪಾಲು ಅಧಿಕ ಗುರುವಿನಲ್ಲಿದೆ ಅವನ ತೂಕ ಪೃಥ್ವಿಯದಕ್ಕಿಂತ ೩೧೮ ಪಾಲು ಹೆಚ್ಚು ಗುರುತ್ವಾಕರ್ಷಣ ಶಕ್ತಿ ನಮಗಿಂತ ಎರಡೂವರೆ ಮಡಿ ಹೆಚ್ಚಾಗಿರುವುದರಿಂದ ಅಲ್ಲಿಯ ಪದಾರ್ಥಗಳ ತೂಕವೂ ಅಷ್ಟೇ ಜಾಸ್ತಿ. ಗುರುವಿನ ಸಾಂದ್ರತೆ ಭೂಮಿಯ ಕಾಲುಪಾಲು ಮಾತ್ರ. ನಮ್ಮಲ್ಲಿ ೫೩ ಕೆ. ಜಿ. ತೂಕವಿರುವ ತರುಣಿಯೊಬ್ಬಳನ್ನು ಗುರುಗ್ರಹಕ್ಕೆ ಕರೆದೊಯ್ದು ತೂಕ ಮಾಡಿದರೆ ೧೩೦ ಕೆ. ಜಿ. ಭಾರ ಕಂಡು ಬಂದೀತು. ಆದರೆ ಗುರುವಿನ ರಚನಾ ಸಾಮಗ್ರಿಗಳು ಪೃಥ್ವಿಯದಕ್ಕಿಂತಲೂ ಹಗುರ. ಗುರು ಒಂದು ಪೂರ್ಣ ಗೋಳವಲ್ಲ. ಉಪಗೋಳ ಅದು ಧ್ರುವಗಳಲ್ಲಿ ೧/೧೬ ರಷ್ಟು ಚಪ್ಪಟೆಯಾಗಿದೆ. ಗೋಳದ ವಿಷುವದ್ವ್ಯಾಸ ಪರಿಮಾಣ ೯೦, ೨೦೦ ಮೈಲಿಗಳು.

ಗುರುವಿನ ಪರಿಭ್ರಮಣಾಕ್ಷವು ಸಂವತ್ಸರವಿಡೀ ಲಂಬ ಮಾನವಾಗಿಯೇ ಇರುವುದರಿಂದ ಅಲ್ಲಿ ವಾಯು ಗುಣ ಭೇದ, ಋತು ಭೇದ, ವಲಯಗಳು ಯಾವುದೂ ಇಲ್ಲ. ಅಲ್ಲಿ ಹಿಮವಿಲ್ಲ. ವಿಷುವದ್ರೇಖೆಯಿಂದ ಆರಂಭಿಸಿ ಸೂರ್ಯನ ತಾಪವು ಧ್ರುವಗಳತ್ತ ಕಮ್ಮಿಯಾಗುತ್ತಾ ಹೋಗುತ್ತದೆ. ಗುರುವಿನ ಎಲ್ಲಾ ಅಕ್ಷಾಂಶಗಳಲ್ಲಿಯೂ ಹಗಲಿರುಳುಗಳ ಪರಿಮಾಣ ಸದಾ ಒಂದೇ ರೀತಿ. ಗುರುವಿನ ಸುತ್ತಲೂ ದಟ್ಟವಾದ ವಾಯುಮಂಡಲ ಆವರಿಸಿಕೊಂಡಿದೆ. ಗುರು ಯಾವುದೇ ಜೀವಿಯನ್ನೊಳಗೊಂಡಿರುವ ಒಂದು ಮೃತ ಗ್ರಹ. ಯಾವ ಜೀವಿಯೂ ಅಲ್ಲಿ ಆಕ್ರಮಿಸದಂತೆ ಮೀಥೇನ್ ಮತ್ತು ಅಮೋನಿಯಾ ಎಂಬ ಅನಿಲಗಳ ಕವಚ ಆವರಿಸಿದೆ.

ಗುರುಗ್ರಹದ ಉಷ್ಣಾಂಶ ಸಮಾರು ೧೩೦ ಡಿಗ್ರಿ ಪೃಥ್ವಿಯ ೩೯೯ ದಿವಸಗಳಿಗೊಮ್ಮೆ ಗುರುವು ಸೂರ್ಯನಿಗೆ ಪಡ್ಪಾಂತರದಲ್ಲಿರುತ್ತಾನೆ. ಆಗ ಗಗನದಲ್ಲಿ ಉಜ್ವಲವಾಗಿ ಹೊಳೆಯುತ್ತಿರುವ ಅವನನ್ನು ಪರೀಕ್ಷಿಸಲು ತಕ್ಕ ಸಮಯವಾಗಿದೆ. ಗುರುವಿನ ವಿಷುವದ್ರೇಖೆಯ ಸಮೀಪ ಬೂದು, ಬಿಳಿ ಮತ್ತು ಹಳದಿ ಬಣ್ಣದ ಕಿರಿದಾದ, ಕೆಲವೊಮ್ಮೆ ದೊಡ್ಡದಾದ ಪಟ್ಟಿಗಳು ಕಾಣಬರುತ್ತವೆ. ಆಗಾಗ ಬಣ್ಣದಲ್ಲಿಯೂ ಆಕಾರದಲ್ಲಿಯೂ ಮಾರ್ಪಾಟು ಹೊಂದುವ ಅವು ಗೋಳಕ್ಕೆ ಪೃಥ್ವಿಯ ಭೂಖಂಡಗಳಂತೆ ಸೇರಿಕೊಂಡಿಲ್ಲ. ಕೆಲವೊಮ್ಮೆ ಇವು ಅದೃಶ್ಯವಾಗಿ ಬಿಡುವುದುಂಟು.

ವಿಷುವದ್ವೃತ್ತದಿಂದ ಧ್ರುವಗಳೆಡೆಗೆ ಹೋಗುವ ಗುರುವಿನ ಪ್ರವಾಹದಲ್ಲಿ, ವಿಷುವದ್ವಲಯ ಪ್ರವಾಹಕ್ಕೂ ಉತ್ತರ ದಕ್ಷಿಣ ಪ್ರವಾಹಗಳಿಗೂ ೫ ನಿಮಿಷ ವ್ಯತ್ಯಾಸ ವಿದೆ ಒಂದೇ ಪ್ರವಾಹ ವೇಗದಲ್ಲಿ ಹೀಗೆ ಹೆಚ್ಚು, ಕಮ್ಮಿಯಾಗುವ ಸಂಗತಿ ಆಶ್ಚರ್ಯಕರ.

ಗುರುವಿನಷ್ಟು ಉಪಗ್ರಹಗಳಿರುವ ಗ್ರಹ ಇನ್ನೊಂದಿಲ್ಲ. ಅವನ ಉಪಗ್ರಹಗಳ ಸಂಖ್ಯೆ ೧೩. ಅವುಗಳ ಪೈಕಿ, ಅತ್ಯಂತ ದೊಡ್ಡದಾದ, ಗಾತ್ರದಲ್ಲಿ ಬುಧನನ್ನು ಮೀರಿಸಿದ ಗಾನಿಯಾಡ್‌ನ ವ್ಯಾಸ ೩, ೫೫೮ ಮೈಲು. ಅದು ೬, ೬೪, ೦೦೦ ಮೈಲು ದೂರದಲ್ಲಿದೆ. ಅವನ ಉಪಗ್ರಹಗಳಲ್ಲಿ ಅತ್ಯಂತ ಕಿರಿದಾದ ಒಂದು ಉಪಗ್ರಹದ ವ್ಯಾಸ ಬರೀ ೧೫೦ ಮೈಲು. ಗುರುವಿಗೆ ತೀರ ಸಮೀಪ ಎಂದರೆ ೧, ೧೩, ೦೦೦ ಮೈಲು ದೂರದಲ್ಲಿ ಅದರ ಸುತ್ತಾಟ. ಗಂಟೆಗೆ ೬೬, ೦೦೦ ಮೈಲು ವೇಗದಲ್ಲಿ ಸುತ್ತುತ್ತಿರುವ ಈ ಉಪಗ್ರಹ ಯಾವುದೇ ಉಪಗ್ರಹಕ್ಕಿಂತ ಅಧಿಕ ವೇಗ ಪಡೆದಿದೆ. ಸೌರವ್ಯೂಹದ ಯಾವ ಗ್ರಹಕ್ಕೂ ಇಷ್ಟು ಸನಿಹದಲ್ಲಿ ಉಪಗ್ರಹವಿರದು. ಗುರುವಿನ ಇತರ ಉಪಗ್ರಹಗಳಲ್ಲಿ ಕಲಿಸ್ಟೋ, ಯುರೋಪ್ ಮತು ಅಯೋಗಳು ಪ್ರಸಿದ್ಧವಾಗಿವೆ. ಅವನ ೧೨ ನೆಯ ಉಪಗ್ರಹವು ಪೃಥ್ವಿಯಿಂದ ಚಂದ್ರನಿಗಿರುವ ದೂರದ ೫೬ ಮಡಿಯಷ್ಟು, ಅಂದರೆ ಹದನಾಲ್ಕು ಲಕ್ಷ ಮೈಲು ದೂರದಲ್ಲಿದೆ. ಗುರುವಿನ ಭ್ರಮಣಕ್ಕೆ ವಿರುದ್ಧವಾಗಿ ಅಪ್ರದಕ್ಷಿಣೆ ಬರುತ್ತಿರುವ ಮೂರು ಉಪಗ್ರಹಗಳೂ ದೂರದಲ್ಲಿವೆ. ಗುರುವಿನ ಮೊದಲನೆ ಉಪಗ್ರಹದ ಮೇಲೆ ನಿಂತು ಅವನನ್ನು ನೋಡಿದರೆ ಚಂದ್ರನಿಗಿಂತ ೧೪೦೦ ಮಡಿ ಹಿರಿದಾಗಿ ಅವನು ಕಾಣಿಸುತ್ತಾನೆ. —

# ಬಸವರಸ ತೋರಿದರೇ ಹೊಸ ಹೊಸ ಲೀಲೆಗಳು

—ಶ್ರೀಮತಿ ಹೆಚ್. ಜಿ. ರಾಧಾದೇವಿ

'ಲೋಕದಂಥ ಕೂಸಲ್ಲ' ಇವ ನಾಕದಿಂದ ಬಂದ ಕಂದ! ಇವನಿಗೆ ಹೆಸರೇನ ಇಡಬೇಕು ?

## ಪವಾಡ ೧

ದೊಡ್ಡ ದೊಡ್ಡ ವಿದ್ವಾಂಸರಿಂದ ಅಣ್ಣನವರ ಚರಿತ್ರೆಗಳನ್ನು ನಾವು ಓದಿ ಅವರ ವ್ಯಕ್ತಿತ್ವದ ಬಗ್ಗೆ ಹೆಮ್ಮೆ ಪಡುತ್ತೇವೆ. ಸತ್ಯ ವಿವರಗಳಿಗೆ ಅಪಚಾರವಾಗದಂತೆ, ವೈಚಾರಿಕ ಮನ ಒಲಿಸುವಂತೆ ಕಾಲ ದೇಶಗಳಿಗೆ ಇಣುಕಿ ತಿಣಿಕಿ, ನೂರಾರು ಗ್ರಂಥಗಳ ಅಧ್ಯಯನಮಾಡಿ ಮಹಾ ಮಹಾ ವಿದ್ವಾಂಸರು ಬರೆಯುವ ಬರವಣಿಗೆ ಒಂದೆಡೆ ಇರಲಿ........

ಯಾರ ಗೊಡವೆಯೂ ಯೋಚಿಸದೆ, ಯಾರನ್ನೂ ಮೆಚ್ಚಿಸುವ ಹಂಬಲವಿಲ್ಲದೆ, ತಮ್ಮ ಮನದ ಸಂತೋಷಕ್ಕೆ ಹೃದಯ ತುಂಬಿದ ಭಕ್ತಿಯಿಂದ, ತಮ್ಮ ಮನ ತುಂಬಿದ ಆನಂದದಿಂದ ಹಾಡುತ್ತಿರುವ ಈ ಹಳ್ಳಿಗರ ವಾಣಿಯಲ್ಲಿ ಅಣ್ಣನವರ ದರ್ಶನ ಕಂಡರೆ ನಾವೇ ಚಕಿತರಾಗುತ್ತೇವೆ. ವೈಚಾರಿಕತೆ ಇಲ್ಲಿ ತಲೆಕೆಳಗಾಗುತ್ತದೆ. ಉತ್ಪ್ರೇಕ್ಷೆ ಅಲಂಕಾರವಾಗುತ್ತದೆ,

ಬಾಗೆವಾಡಿ ಬಸವಂಗೆ ಸುವ್ವಲಾಲಿ ।
ಬಾಗಿ ಶರಣೆಂದೆನಯ್ಯ ಸುವ್ವಲಾಲಿ ॥
ಮಾಡಿ ಮೆರೆದ ಪವಾಡಗಳ ಸುವ್ವಲಾಲಿ ।
ಹಾಡಿ ಕರವ ಮುಗಿದೆನೊ ಸುವ್ವಲಾಲಿ ॥

ಬಸವರಸರಿಗೆ ಶರಣು ಎಂದು ನಮಿಸಿದ ನಂತರ ಅವರ ಒಂದೊಂದೇ ಪವಾಡಗಳನ್ನು ಸ್ಮರಿಸಲು ಈ ಜನಪದ ಕವಿ ಕಾತುರನಾಗಿದ್ದಾನೆ. ಈ ಪವಾಡ ನೆನೆದರೆ ತನ್ನ ಭವದ ಬಂಧನವೇ ಹರಿದು ಜನ್ಮ ಮುಕ್ತನಾಗುವೆನೆಂಬ ಧನ್ಯತೆ ಕವಿಗಿದೆ.

ಇಂಗಳೇಶ್ವರ ಬಸವರ ಸುವ್ವಲಾಲಿ ।
ಚಂದದಮಹಿಮೆ ಬಹಳ ಸುವ್ವಲಾಲಿ ॥
ಒಂದೊಂದು ಮಹಿಮೆ ಸ್ಮರಿಸೆ ಸುವ್ವಲಾಲಿ ॥
ಭವಬಂಧನವೆ ಪರಿಹಾರ ಸುವ್ವಲಾಲಿ ॥

ಇಷ್ಟು ಕಾತುರತೆಯಿಂದ ನೆನೆವ ಮೊದಲು ಈ ಬಸವಣ್ಣನವರು ಯಾರು ಎಲ್ಲಿಂದ ಬಂದರು ಎಂಬುದಕ್ಕೆ ಕವಿ ಹೇಳುವ ವಿವರ ನೋಡಿ.

ಮುಂದೆ ಕೈಲಾಸದಾಗೆ ಸುವ್ವಲಾಲಿ ॥
ಹೆಂಗಿದ್ರೊ ಅಲ್ಲಿ ಬಸವ ಸುವ್ವಲಾಲಿ ॥
ನಂದಿ ಎನಿಸಿ ಶಿವನಿಗಿದ್ರೊ ಸುವ್ವಲಾಲಿ ॥
ಸುಳ್ಳೆಂದ್ರೆ ನರಕ ನಿನಗೆ ಸುವ್ವಲಾಲಿ ॥

ತನ್ನ ಸೊಲ್ಲು ಸುಳ್ಳೆಂದವರಿಗೆ "ನರಕ" ಎಂದು ಕೆಚ್ಚಿನಿಂದ ಸವಾಲು ಹಾಕಿ ಅಪರಿಮಿತ ಭಕ್ತಿಯಿಂದ ವಿವರ ಪ್ರಾರಂಭಿಸುತ್ತಾನೆ ಕವಿ, ಕೈಲಾಸದಲ್ಲಿ ಶಿವನ ವಾಹನ ನಂದಿಯಾಗಿ ಮೆರೆಯುತ್ತಿದ್ದ ಈ ಭಕ್ತ ಭೂಲೋಕದಲ್ಲಿ ಏಕೆ ಹುಟ್ಟಿದ.... ?

ಈ ಪ್ರಶ್ನೆಗೆ ಉತ್ತರ ಮುಂದಿನ ಕವಿತೆಯ ಸಾಲುಗಳು....

ಭೂಮಿಯಲ್ಲಿ ಪಾಪಹೆಚ್ಚಿ ಸುವ್ವಲಾಲಿ ।
ದೇವಲೋಕ ಕರಿಕಾಯ್ತು ಸುವ್ವಲಾಲಿ ॥
ದೇವುತೆಗಳು ಅಂಜಿಕೂಗೆ ಸುವ್ವಲಾಲಿ ।
ಶಿವ ನಕ್ಕು ಬಸವನ್ನ ಕಳಿಸ್ಯಾನೆ ಸುವ್ವಲಾಲಿ ॥

ಭೂಲೋಕದಲ್ಲಿ ಹೆಚ್ಚಿದ ಪಾಪದ ಹೊಗೆಯಿಂದ ದೇವಲೋಕವೂ ಕರಿಗಾಗಿ ಸೀದು ಪ್ರಾ

ಯ್ತಂತೆ. ದೇವತೆಗಳು ಅಂಜಿ ಭಯದಿಂದ ಮೊರೆ ಇಟ್ಟಾಗ–ಶಿವ ನಸುನಕ್ಕು ಅವರನ್ನು ಸಂತೈಸಿ ತನ್ನ ಪ್ರಿಯಭಕ್ತ ನಂದಿಯನ್ನು ಕಳಿಸುತ್ತಾನಂತೆ. ಏತಕ್ಕಾಗಿ ?

ಪಾಪ ಅಡಗಿಸಿ ಬಾರೊ ಸುವ್ವಲಾಲಿ ।
ಪುಣ್ಯ ಅಬ್ಬಿಸಿ ಬಾರೊ ಸುವ್ವಲಾಲಿ ॥
ಧರ್ಮ ನಿಲ್ಲಿಸಿ ಬಾರೋ ಸುವ್ವಲಾಲಿ । (ಹೀಗೆಂದು)
ಬಸವನ್ನ ಕಳಿಸ್ಯಾನೆ ಶಿವ ಸುವ್ವಲಾಲಿ ॥

ಈ ರೀತಿ ಶಿವನಾಜ್ಞೆ ಹೊತ್ತು ಭೂಮಿಗೆ ಬಂದ ನಂದೀದೇವ ಮಾದರಸ ಮಾದಲಾಂಬಿಕೆಯರ ಮಗನಾಗಿ ಜನಿಸುತ್ತಾರೆ. ಇದು ಲೋಕದಂಥ ಬಸಿರಲ್ಲ ಲೋಕದಂಥಾ ಜನನವೂ ಅಲ್ಲ,

ಹಸ್ತದಾಗೆ ಹಾಲು ತುಂಬಿ ಸುವ್ವಲಾಲಿ ।
ಮತ್ತೆ ಮಾದಲಾಂಬಿಕೆ ಬೊಗಸಿಂದ ಸುವ್ವಲಾಲಿ ॥
ಹೆತ್ತಮ್ಮ ಎಂದು ಜಿಗಿದ ಸುವ್ವಲಾಲಿ ।
ಹೊತ್ತು ಹೆತ್ತ ಪರಿಯಲ್ಲ ಸುವ್ವಲಾಲಿ ॥

ಬೊಗಸೆ ತುಂಬ ಹಾಲು ತುಂಬಿ ಶಿವನ ಮುಂದೆ ಹಿಡಿದು ಶಿವನಾಮ ಜಪಿಸುತ್ತ ಮಾದಲಾಂಬಿಕೆಗೆ ನಿಂತಂತೆ ' ಹೆತ್ತಮ್ಮ' ಎಂದು ಕೂಗುತ್ತಾ ಬಸವಣ್ಣ ಆ ಬೊಗಸೆಯಿಂದ ಜಿಗಿದನಂತೆ. ಹೆತ್ತಮ್ಮನೆಂದು ಕರೆ ಯಲಿಕ್ಕೆ ಹೆತ್ತದ್ದೆಂದೊ–ಹೊತ್ತದ್ದೆಂದೊ ಎಂದು ಆಕೆ ಸಂದೇಹ ತಾಳುತ್ತಾಳೆ. ಆಗ ಶಿವನೇ ಪ್ರತ್ಯಕ್ಷನಾಗಿ—

ಒಂಬತ್ತು ತಿಂಗಳಿಂದ ನೀನು ಸುವ್ವಲಾಲಿ ।
ಮಡಿಲಲ್ಲಿ ಬೆಂಕಿಹೊತ್ತು ಬೇಡಿದೆ ಸುವ್ವಲಾಲಿ ॥
ಅಂದಿನ ತಪಸಿಗೊಲಿದು ನಿನಗೆ ಸುವ್ವಲಾಲಿ ।
ಕಂದನ್ನ ಕೊಟ್ಟೇನಿ ಕೇಳಿ ಸುವ್ವಲಾಲಿ ॥

ಎಂದು ಸಮಾದಾನ ಹೇಳುತ್ತಾನೆ. ಈ ವಿಚಿತ್ರ ಕಂಡು ಊರಿಗೆ ಊರೇ ನೆರೆಯುತ್ತದೆ. ಈ ವರ ಪುತ್ರನಿಗೆ ಹೆಸರೇನಿಡುವುದೆಂದು ಊರೆಲ್ಲಾ ಚಿಂತಿ ಸುತ್ತಾರೆ.

" ಲೋಕದಂಥ ಕೂಸಲ್ಲ—ನಾಕದಿಂದ ಬಂದ ಕೂಸು " ಇದಕ್ಕೆ ಏನು ಹೆಸರಿಡಬೇಕು !!! ? ಅಲ್ಲದೇ ಶಿವನ ಪ್ರಸಾದದಿಂದ ಬಂದ ಮೇಲೆ ಇದರಲ್ಲಿ ಶಿವನ ಅಂಶ ಅಡಗಿರಬೇಕಲ್ಲವೆ ?

ಈ ಕೂಸಿನಲ್ಲಿರುವ ಶಿವನ ಅಂಶ ಯಾವುದಿರಬೇಕು–?

ಶಿವನ ಶಿರದ ಚಂದ್ರನಾದ್ರೆ ಸುವ್ವಲಾಲಿ ।
ಇವನ ಚಂದ್ರನೆನ್ನುತ್ತೇವೆ ಸುವ್ವಲಾಲಿ ॥
ಶಿವನ ಹಣೆಯ ಅಗ್ನಿಯಾದ್ರೆ ಸುವ್ವಲಾಲಿ ।
ಇವನ ಅನಲ ಎನ್ನುತ್ತೇವೆ ಸುವ್ವಲಾಲಿ ॥

ಈ ಮಾತು ಕೇಳಿದರೂ ಶಿಶು ಅರೆಗಣ್ಣು ಮುಚ್ಚಿ ನಿಶ್ಚೇತನವಾಗಿ ಬಿದ್ದಿರುತ್ತದೆ, ಆಗ ಆ ಊರ ವರು ಮತ್ತೆ—

ಶಿವನ ಕೈಯ್ಯಾಗೆ ತ್ರಿಶೂಲವಾದ್ರೆ ಸುವ್ವಲಾಲಿ ।
ಇವನ ಅಸ್ತ್ರಕ ಎನ್ನುತ್ತೇವೆ ಸುವ್ವಲಾಲಿ ॥
ಶಿವನ ಕೊರಳ ರುದ್ರಾಕ್ಷಿ ಸುವ್ವಲಾಲಿ ।
ಇವನ ರುದ್ರನೆಂದು ಕರೆದೇವು ಸುವ್ವಲಾಲಿ ।

ಆಗಲೂ ಮಗು ಸುಮ್ಮನೆ ಬಿದ್ದಿರುತ್ತದೆ ರುಂಡಮಾಲೆ, ಭಸ್ಮ, ಗಜಚರ್ಮ, ಪುಲಿದೊಗಲು, ಬೃಂಗಿ, ಭೂತಗಣಗಳ ಹೆಸರನ್ನು ಹೇಳಿ ಸಾಕಾದ ಊರವರು—

ಶಿವನ ಪುತ್ರ ಗಣಪನೇನೊ ಸುವ್ವಲಾಲಿ ।
ಹಿಂಗೆಂದ್ರೆ ಕರನ ಮುಗಿದ ಸುವ್ವಲಾಲಿ ॥
ಶಿವನ ಭಕ್ತ ಗುಹನೇನೋ ಸುವ್ವಲಾಲಿ ।
ಹಿಂಗೆಂದ್ರೆ ಕರನ ಮುಗಿದ ಸುವ್ವಲಾಲಿ ॥

ಗುಹ ಗಣಪರ ಹೆಸರನ್ನು ಕೇಳಿದಾಗ ಶಿಶು ಕಣ್ಣರಳಿಸಿ ನಗುತ್ತದೆ. ಕಡೆಗೆ ಊರಿನ ಜ್ಞಾನಿ ಶಿವ ಭಕ್ತನೊಬ್ಬ —

ಶಿವನ ವಾಹನವಾದ ಸುವ್ವಲಾಲಿ ।
ಭುವನೈಕ ನಂದಿಯೇನೊ ಸುವ್ವಲಾಲಿ ॥
ದಿವಿಜಲೋಕ ಬಿಟ್ಟು ಬಂದ್ರೆ ಸುವ್ವಲಾಲಿ ।
ಬಸವನೆಂದು ಕರೆದೇವೂ ಸುವ್ವಲಾಲಿ ॥

ಈ ಮಾತು ಹೇಳುತ್ತಲೆ ಶಿಶು ಕಣ್ಣರಳಿಸಿ ನಗುತ್ತದೆ- ಆಗ ದೇವಾಲಯದಲ್ಲಿ ಒಂದು ಪವಾಡ ನಡೆಯುತ್ತದೆ ಏನೆಂದರೆ

ಕಲ್ಲಿನಲ್ಲಿ ಕಡೆದನಂದಿ ಸುವ್ವಲಾಲಿ ।
ಸೊಲ್ಲು ಗಂಟೆ ಘಣರೆಂದ್ವೊ ಸುವ್ವಲಾಲಿ ॥
ಅಲ್ಲಿನ ಸದ್ದಿಗೆ ತಾಳವಾಗಿ ಸುವ್ವಲಾಲಿ ।
ಚೆಲ್ವಶಿವಲಿಂಗದಿಂದ ಹೂ ಉದುರೆ ಸುವ್ವಲಾಲಿ ॥

ಶಿವನ ಮುಂದಿದ್ದ ಕಲ್ಲಿನ ಬಸವಣ್ಣನ ಕೊರಳಿನ ಗಂಟೆ ತಾನಾಗಿ ಘಣಿ ಘಣಿರೆಂದು ಸದ್ದಾಗಲು, ಆ ಸದ್ದಿಗೆ ಜೊತೆಯಾಗಿ ಶಿವನ ಲಿಂಗದಿಂದ ಹೂಗಳು ದಳ ದಳ, ಉದುರುತ್ತವೆ. ಆಗ ಊರವರು ಮಗುವಿಗೆ "ಬಸವಣ್ಣಾ" ಎಂದು ಹೆಸರಿಡುತ್ತಾರೆ ಮಾದರಸ ಮಾದಲಾಂಬಿಕೆಯರ ಪುತ್ರನ ಒಂದನೇ ಪವಾಡಕ್ಕೆ ಮಂಗಳವಾಗಲಿ. ★

---

( 18 ನೇ ಪುಟದಿಂದ)

ಇತ್ತೀಚೆಗಿನ ಕೆಲವರು ಗ್ರಹಾಭ್ಯಾಸಿಗಳು ಗುರುವಿನಲ್ಲಿ ವಿಪರೀತ ಶೀತವಿದೆಯೆಂದೂ ಅಲ್ಲಿ ಅಮ್ಲ ಜನಕ ವಿದೆಯೆಂದೂ ಆದರೆ ನೀರಿಲ್ಲವೆಂದೂ ಹೇಳುತ್ತಾರೆ. ಗುರುವಿನಲ್ಲಿ ಹೋದ ಪೃಥ್ವಿವಾಸಿ ಅಧಿಕ ಭಾರವನ್ನೂ ಸಹಿಸಿಕೊಳ್ಳಬೇಕಾಗುತ್ತದೆ. ಗುರುವಿನ ಗುರುತ್ವಾಕರ್ಷಣ ಶಕ್ತಿಯಿಂದ ಪಾರಾಗಲು ಗಂಟೆಗೆ ೧೩೩,೦೦೦ ಮೈಲು ಬೇಕಾಗುತ್ತದೆ. ಇದು ಪೃಥ್ವಿಯದಕ್ಕಿಂತ ಸುಮಾರು ೫ ಪಟ್ಟು ಅಧಿಕ. ಈಗಿರುವ ಬಾಹ್ಯಾಕಾಶ ನೌಕೆಗಳಾದರೆ ಗುರುವನ್ನು ತಲುಪಲು ೬ ವರ್ಷಗಳೇ ಬೇಕಾದೀತೇನೋ ! ಆದರೆ ಪ್ರಕಾಶ ವೇಗದಲ್ಲಿ ಸಾಗುವ ಆಕಾಶ ನೌಕೆಗಳ ನಿರ್ಮಾಣವಾದರೆ, ಸೆಕೆಂಡಿಗೆ ೧,೮೬,೦೦೦ ಮೈಲು ಸಾಗಿದರೂ ಅವನಲ್ಲಿಳಿಯಲು ಬೇಕಾಗುವ ಅವಧಿ ೫೫ ನಿಮಿಷ !.

ಜ್ಯೋತಿಶ್ಶಾಸ್ತ್ರದಲ್ಲಿ ಗುರು ತುಂಬಾ ಬೇಕಾದ ಗ್ರಹ. 'ಗುರು ದೆಸೆ' ಎಂದರೆ ಮನುಷ್ಯನ ಕಾರ್ಯಗಳು ಬೃಹದಾಕಾರವಾಗಿ ಕೈಗೂಡುವ ಶುಭ ಚಿಹ್ನೆ.

ವಯಸ್ಸಿನಲ್ಲಿ ಪೃಥ್ವಿಗಿಂತ ದೊಡ್ಡವನಾದ ಬೃಹಸ್ಪತಿ ಇನ್ನೂ ಸೌಮ್ಯ ಸ್ಥಿತಿಯನ್ನು ಹೊಂದಿಲ್ಲ. ಸಂಪೂರ್ಣ ಅನಿಲಮಯ ಗೋಳವೆಂದೇ ನಂಬಿಕೆಯಲ್ಲಿರುವ ಗುರು ಗರ್ಭವು ಜಲಾವಸ್ಥೆಯಲ್ಲಿದೆಯೋ ಅನಿಲಾವಸ್ಥೆಯಲ್ಲಿದೆಯೋ ಎಂಬುದನ್ನು ಖಗೋಳ ತಜ್ಞರು ನಿಷ್ಕರ್ಷಿಸಿಲ್ಲ. ★

---

## ಬಸವ ಸಮಿತಿ

ಶ್ರೀ ಬಸವೇಶ್ವರ ಜಯಂತಿ ಅಂಗವಾಗಿ ಬಸವ ಸಮಿತಿ ಆಶ್ರಯದಲ್ಲಿ ವಚನ ಸಾಹಿತ್ಯ ಕುರಿತು ವಿಚಾರಪೂರ್ಣ ವಿದ್ವತ್ ಗೋಷ್ಠಿಯೊಂದನ್ನು ಏಪ್ರಿಲ್ 20, 21 ಈ ಎರಡು ದಿನಗಳಲ್ಲಿ ಬೆಳಿಗ್ಗೆ ಸಂಜೆ ಎರಡು ಅಧಿವೇಶನಗಳಲ್ಲಿ ನಡೆಯಿತು. ಇದು ಕಲ್ಯಾಣದ ಅನುಭವ ಮಂಟಪದ ಸಂಸ್ಮರಣೆಯದಾಗಿತ್ತು. ಈ ಗೋಷ್ಟಿಯಲ್ಲಿ ನಾಡಿನ ಪ್ರತಿಭಾನ್ವಿತ ಗಣ್ಯ ವಿದ್ವಾಂಸರುಗಳು ವಚನ ಸಾಹಿತ್ಯದ ಬಗೆಗೆ ಪ್ರಬಂಧಗಳನ್ನು ಮಂಡಿಸಿ, ತಮ್ಮ ವಿಚಾರ ಧಾರೆಗಳನ್ನು ಸಮರ್ಥಿಸಲು ಆದರ್ಶ ವೇದಿಕೆಯಾಗಿತ್ತು. ಈ ಗೋಷ್ಟಿಗೆ ಸಮಾಜದ ಎಲ್ಲಾ ಶರಣ ಶರಣೆಯರು ಅಧಿಕ ಸಂಖ್ಯೆಯಲ್ಲಿ ಭಾಗವಹಿಸಿ ತಮ್ಮ ಪ್ರಶ್ನಾವಳಿಗಳನ್ನು ಮಂಡಿಸಿ ವಿಮರ್ಶಾತ್ಮಕ ಚರ್ಚೆಗೆ ಅವಕಾಶ ಕಲ್ಪಿಸಿಕೊಳ್ಳಲಾಗಿತ್ತು. 20 4.77 ರ ಬೆಳಗಿನ ಪ್ರಥಮ ಗೋಷ್ಠಿ ಅಧ್ಯಕ್ಷತೆ ಘನೆತವೆತ್ತ ಶ್ರೀ ಟಿ. ಎನ್ ಮಲ್ಲಪ್ಪನವರು ವಹಿಸಿದ್ದರು. ಡಾ|| ಎಂ. ಚಿದಾನಂದ ಮೂರ್ತಿಗಳು ಹಾಗೂ ಶ್ರೀ ಟಿ. ಸುಂದರೇಶನ್ ಇವರುಗಳು ತಮ್ಮ ವಿದ್ವತ್ ಪೂರ್ಣ ಪ್ರಬಂಧಗಳನ್ನು ಮಂಡಿಸಿದರು. ಸಂಜೆ ಗೋಷ್ಠಿ: ಡಾ|| ಪಿ. ವಿ. ನಾರಾಯಣ ಮತ್ತು ಶ್ರೀ ಸಿದ್ದಯ್ಯ ಪುರಾಣಿಕ ಅವರಿಂದ ಮತ್ತು ಕಾರ್ಯದರ್ಶಿಗಳಾದ ಶ್ರೀ ಅನ್ನದಾನಯ್ಯ ಪುರಾಣಿಕ ಅವರಿಂದ 21.4.77 ರ ಬೆಳಗಿನ ದ್ವಿತೀಯ ಗೋಷ್ಠಿ ಅಧ್ಯಕ್ಷತೆ, ಶ್ರೀ ಎಸ್. ಎಸ್. ಮಳಿಮಠ್‌ರವರು ವಹಿಸಿದ್ದರು. ಶ್ರೀ ಪಂಡಿತ ಚೆನ್ನಪ್ಪ ಎರೇಸೀಮೆ, ಶ್ರೀ ಡಾ||ಎಂ.ಜಿ. ಬಿರಾದಾರ ಶ್ರೀ ಟಿ.ಆರ್. ಮಹದೇವಯ್ಯ ಮತ್ತು ಆರ್. ರಾಚಪ್ಪ ಅವರು ಭಾಗವಹಿಸಿ ಮಾತನಾಡಿದರು. ಸಂಜೆಯ ಗೋಷ್ಠಿಯ ಅಧ್ಯಕ್ಷತೆಯನ್ನು ಅ. ಭಾ. ವೀ. ಮ ಸಭೆಯ ಅಧ್ಯಕ್ಷರಾದ ಶ್ರೀ ಜೆ. ಜಿ. ಮಲ್ಲಾರಾಧ್ಯ ವಹಿಸಿದ್ದರು. ಕುಮಾರಿ ರತ್ನ ಅವರಿಂದ ಪ್ರಾರ್ಥನೆ, ಶ್ರೀ ಚನ್ನಪ್ಪ ಎರೇಸೀಮೆಯವರ ಸ್ವಾಗತ ಗೋಷ್ಠಿಯಲ್ಲಿ ಶ್ರೀ ಎಸ್. ಶಿವಣ್ಣ ಮತ್ತು ಆರ್. ರಾಚಪ್ಪನವರು ವಚನ ಸಾಹಿತ್ಯ ಕುರಿತು ಮಾತನಾಡಿದರು. ಶ್ರೀ ಜೆ. ಜಿ. ಮಲ್ಲಾರಾಧ್ಯರು ಸಮಾರೋಪ ಭಾಷಣಮಾಡಿ ವಚನ ಸಾಹಿತ್ಯ ಗೋಷ್ಠಿಯ ಮಹತ್ವವನ್ನು ಬಣ್ಣಿಸಿದರು.

# ರಾಷ್ಟ್ರ ಭದ್ರತೆ

## —ಯುವಜನರ ಪಾತ್ರ

—ರಮಾಕುಮಾರಿ

ಪ್ರಸ್ತುತ ಸಮಯದಲ್ಲಿ ಯುವಜನರ ಪಾತ್ರ ಹಿರಿದು ಮತ್ತು ಮಹತ್ವದ್ದಾಗಿದೆ. ಅನೇಕ ಶತಮಾನಗಳಿಂದಲೂ ಸ್ವತಂತ್ರ ಬುದ್ಧಿ ಬೆಳೆಯದಂತೆ ಬಿಗಿದಿದ್ದ ಹಿರಿಯರ ಹಾಗೂ ಸಂಪ್ರದಾಯ ಸಮಾಜದ ಕಟ್ಟುಪಾಡುಗಳು ಸಡಿಲವಾಗಿದೆ. ಮೂಢನಂಬಿಕೆ ಕುರುಡುಸಂಪ್ರದಾಯಗಳ ಶೃಂಖಲೆಗಳನ್ನು ಹರಿದೊಗೆದು ಯುವಜನಾಂಗ ರಾಷ್ಟ್ರದ ಪ್ರಗತಿಯೆಡೆ ಮುಖಮಾಡಿದೆ; ಜನಾಂಗದ ಉದ್ಧಾರಕ್ಕಾಗಿ ಶ್ರಮಿಸತೊಡಗಿದೆ; ತಾನು ಗುರಿ ಮುಟ್ಟಬೇಕಾದ ದಾರಿಯೆಡೆ ಸಾಗುತ್ತಿದೆ. ಇದಕ್ಕೆ ಪ್ರಧಾನಿಯವರ 20 ಅಂಶಗಳ ಕಾರ್ಯಕ್ರಮ ಉತ್ತೇಜನಕಾರಿಯಾಗಿದೆ. ಇಂದಿನ ಪರಿಸ್ಥಿತಿಯಲ್ಲಿ ಯುವಜನತೆ ರಾಷ್ಟ್ರದ ಏಳಿಗೆಯಲ್ಲಿ ತಮ್ಮ ಪಾತ್ರವೇನು ? ಎಂಬುದನ್ನು ಅರಿತು ಮುನ್ನಡೆಯಬೇಕಾಗಿದೆ.

ನಮ್ಮ ದೇಶದ, ಸಾಮಾಜಿಕ ಸಮಸ್ಯೆಗಳನ್ನು ಮೊದಲು ಅರ್ಥಮಾಡಿಕೊಂಡು ಹಿಂದುಳಿದವರ ದೀನದಲಿತರ, ಮಹಿಳೆಯರ–ಮಕ್ಕಳ ಉದ್ಧಾರಕ್ಕಾಗಿ ಅವರ ಸಮಸ್ಯೆ ಪರಿಸ್ಥಿತಿಗಳನ್ನು ಅಧ್ಯಯನಮಾಡಿ, ಅವುಗಳನ್ನು ಪರಿಹರಿಸುವಲ್ಲಿ ಶ್ರಮವಹಿಸಿ, ಶಿಸ್ತಿನಿಂದ ದುಡಿಯಬೇಕಾಗಿದೆ. ಸಮಾಜದಲ್ಲಿ ತಾಂಡವಾಡುವ ಹಲವೇ ಬಂಡಾಯಗಾರರ ವಿರುದ್ಧ ಹೋರಾಡಬೇಕು. ನಮಗೆ ನಾವೇ ಶತ್ರುಗಳು. ಸಾಮಾಜಿಕ ಪಿಡುಗುಗಳೇ ನಮ್ಮ ವೈರಿಗಳು. ಇದನ್ನೆಲ್ಲಾ ಹೋಗಲಾಡಿಸಲು ಕಾರ್ಯೇಣಾವಾಚಾ ಮನಸಾ ಶ್ರಮಿಸಬೇಕು. ಯುವ ಜನತೆಯಲ್ಲಿ ನಿಷ್ಠೆ

> ಶಿಸ್ತು ಮತ್ತು ನಿಷ್ಠೆ ಯುವಜನರ ಉಚ್ಛ್ವಾಸ ನಿಶ್ವಾಸಗಳಾಗಬೇಕು. ಅನ್ಯಾಯದ ವಿರುದ್ಧ ಪ್ರತಿಭಟನೆ, ಸತತ ಪರಿಶ್ರಮ, ಸ್ವಾರ್ಥತ್ಯಾಗ, ದೇಶಾಭಿಮಾನ, ಐಕ್ಯತೆ ಇವು ಇಂದಿನ ಜನಾಂಗದ ನರನಾಡಿಗಳಲ್ಲಿ ಬೆರೆತು ಮಿಡಿಯದ ಹೊರತು ದೇಶದ ಪ್ರಗತಿ ಕಷ್ಟಸಾಧ್ಯ.

ಬೆಳೆದಂತೆಲ್ಲಾ, ನಮ್ಮ ಆಡಳಿತ ಸುಗಮವಾಗಿ ನಡೆಯುತ್ತದೆ. ಇದನ್ನರಿತು ಯುವಜನತೆ ಸ್ವೇಚ್ಛಾಚಾರ ಮಾರ್ಗದಲ್ಲಿ ನಡೆಯದೆ ಸ್ವತಂತ್ರ ವಿಚಾರ ಧಾರೆಯನ್ನು ರೂಢಿಸಿಕೊಂಡು ಯಾವ ರಾಜಕೀಯ ಪ್ರಭಾವಕ್ಕೂ ಒಳಗಾಗದೆ ಆತ್ಮಸಾಕ್ಷಿಯಾಗಿ ನಡೆದಾಗ ನಮ್ಮ ನಾಡು ಸುಂದರ ಸುಮಧುರ ಸ್ವರ್ಗವಾದೀತು ; ಇಂದು ನಮ್ಮ ರಾಷ್ಟ್ರಕ್ಕೆ ನಿಷ್ಠಾವಂತ ಕೆಲಸಗಾರರು, ದೇಶಾಭಿಮಾನೀ ಯುವಜನತಯ ಅವಶ್ಯಕತೆ ಇದೆ. ಸ್ವಾರ್ಥ ಮನೋಭಾವವನ್ನು ತ್ಯಜಿಸಿ ಆಸೆ ಆಮಿಷ ರಹಿತರಾಗಿ, ಇಡೀ ದೇಶದ ಜನರೆಲ್ಲಾ ಒಂದೇ ಎಂಬ 'ವಿಶ್ವ ಕುಟುಂಬತ್ವ' ಭಾವನೆಯನ್ನು ಬೆಳೆಸಿಕೊಂಡು ತಮಗಾಗಿ ದುಡಿಯದೇ ಇಡೀ ಸಮಾಜಕ್ಕಾಗಿ ದುಡಿದಾಗ ಮಾತ್ರ ಯುವಜನತೆ ದೇಶದ ಪ್ರಗತಿಗೆ ಭದ್ರಬುನಾದಿಯಾಗಬಲ್ಲದು. ಶಿಸ್ತು ಮತ್ತು ನಿಷ್ಠೆಗಳು ನಮ್ಮ ಉಚ್ಛ್ವಾಸ ನಿಶ್ವಾಸವಾಗಬೇಕು. ರಾಷ್ಟ್ರಪ್ರೇಮವೇ ಜೀವನ ಮಂತ್ರವಾಗಿ, ದೇಶಾಭಿಮಾನ ಮೂಡಬೇಕು. ನಮ್ಮಲ್ಲಿ ಸಾಮಾಜಿಕ ಪ್ರಜ್ಞೆ, ನೈತಿಕ ಮೌಲ್ಯಗಳ ಅರಿವು ಮೂಡಿ, ನಾವು ಯಾವಾಗ ಕರ್ತವ್ಯ

ಶೀಲರಾಗುತ್ತೇವೆಯೋ ಆಗ ನಾವೂ ಸುಖದಿಂದಿದ್ದು, ಸಮಾಜವನ್ನು ನೆಮ್ಮದಿಯಿಂದಿರುವಂತೆ ಮಾಡುತ್ತೇವೆ. ಕುತ್ಸಿತ ಮನೋಭಾವವನ್ನು ಕಿತ್ತು ಹಾಕಿ ಸಮಾಜಕ್ಕೆ ಆಗುವ–ಆಗುತ್ತಿರುವ ಅನ್ಯಾಯವನ್ನು ಎತ್ತಿ ತೋರಿಸಿ, ಪ್ರತಿಭಟಿಸುವ ಎದೆಗಾರಿಕೆ ಮೂಡಬೇಕು. ಕೆಡುಕನ್ನು ಎತ್ತಿ ತೋರಿಸಿ, ಸರಿಪಡಿಸುವ ತಾರ್ಕಿಕ ಮನೋಭಾವ ವಿಮರ್ಶಾ ಬುದ್ಧಿ ಹರಿತವಾಗಬೇಕು. ಹೀಗಾದಾಗ ಮಾತ್ರ ಸುಭದ್ರ ಆಡಳಿತ ಸುಗಮವಾಗುವುದು. ಅನ್ಯಾಯ ಅತ್ಯಾಚಾರಗಳನ್ನು ಕಂಡೂ ಸುಮ್ಮನಿರುವ ಪರಿಸ್ಥಿತಿ ಬದಲಾಗಬೇಕು. ತಾನು ಮಾಡಿದ್ದೇ ಸರಿ ಎಂಬ ಅಹಂಭಾವವನ್ನು ತೊರೆದು ಅಧಿಕಾರ ವ್ಯಾಮೋಹ, ಧನದಾಹವನ್ನು ಸುಟ್ಟುಹಾಕಿ ನಾಡಿನ ಏಳಿಗೆಗಾಗಿ ರಾಷ್ಟ್ರ ಭದ್ರತೆಗಾಗಿ ಸೊಂಟಕಟ್ಟಿ ನಿಲ್ಲಬೇಕು.

ನಾವು ಕಲಿಯುವ ವಿದ್ಯೆಯ ಫಲದಿಂದ ಸ್ವತಂತ್ರ ವಿಚಾರಧಾರೆ, ವೈಚಾರಿಕತೆ, ಸಾತ್ವಿಕಗುಣ, ಸದ್ಭಾವನೆಗಳು, ಮೂಡಬೇಕೇ ವಿನಹ ಸಮಾಜಕ್ಕೆ ಆತಂಕಕಾರಿಯಾದ ಕೃತ್ಯಗಳತ್ತ ಮನಬರಬಾರದು. ಸಾಮಾಜಿಕ ವಿಪ್ಲವಗಳ ಬಗ್ಗೆ ಚಿಂತನೆ ಮಾಡುವ ಗುಣಗ್ರಹಕ ಶಕ್ತಿ, ವಿಶಾಲ ದೃಷ್ಟಿಕೋನವನ್ನು ಬೆಳಸಿಕೊಳ್ಳಬೇಕು. ಇಂದು ಸಮಾಜವನ್ನು ಉದ್ಧರಿಸುವ ನೆಪದಲ್ಲಿ ಎಲ್ಲವನ್ನೂ ಹಾಳುಗೆಡವಿ ಸ್ವಾರ್ಥಚಿಂತನೆ ಮಾಡುವ ಜನ ಬಹುಮಂದಿ ಇದ್ದಾರೆ. ನಮ್ಮ ಸಮಾಜವನ್ನು ನಾವೇ ಹಾಳು ಮಾಡಿದರೆ ಉದ್ಧರಿಸುವವರಾರು ? ಈ ಒಳಿತು ಕೆಡುಕುಗಳಿಗೆಲ್ಲಾ ನಾವೇ ಕಾರಣರು ತಾನೇ ? ಹಾಗೆ ಕೆಡುಕಿಗೆ ಕಾರಣರಾಗುವ ಬದಲು ಒಳಿತಿಗೇ ಕಾರಣರಾದರೆ ಒಳ್ಳೆಯದಲ್ಲವೇ........ಪ್ರಥಮವಾಗಿ ಆಯಾ ಸಮಾಜದ ಜನರು ಆಯಾ ಸಮಾಜವನ್ನು ದಕ್ಷತೆಯಿಂದ, ಸುರಕ್ಷತೆಯಿಂದ ಕಾಪಾಡಿಕೊಂಡು ಬಂದರೆ ನಮ್ಮ ರಾಷ್ಟ್ರೀಯಾ ಭದ್ರತೆ ನೆಲೆಗೊಳ್ಳುತ್ತದೆ. ಹೀಗೆ ಮಾಡಿದರೆ ಪ್ರತಿಯೊಬ್ಬನೂ ಸಮಾಜದ ಋಣ ತೀರಿಸಿದಂತಾಗುತ್ತದೆ. ಇಂದು ಆಂತರಿಕ ಭದ್ರತೆಯನ್ನು ಕಾಪಾಡಬೇಕು. ಯುವಜನತೆ ಸಮಾಜದಲ್ಲಿ ಮುಕ್ತವಾಗಿ ಭಾಗವಹಿಸುವ ಶಕ್ತಿ, ಪ್ರೀತಿ, ಅಭಿಮಾನ, ವಿಶ್ವಬಂಧುತ್ವವನ್ನು, ಬೆಳಸಿಕೊಂಡು ಬರಲು ಶಿಕ್ಷಕರು ಮುಖ್ಯಕಾರಣರು. ರಾಷ್ಟ್ರಕ್ಕೆ ಅಗತ್ಯವಿರುವ ಉತ್ತಮ ಜನನಾಯಕರನ್ನು; ಪ್ರತಿಭಾವಂತರನ್ನೂ, ರೂಪಿಸುವ ಶಿಲ್ಪಿ ಶಿಕ್ಷಕನಲ್ಲವೇ ? ಯುವಜನರ ಸುಪ್ತಚೇತನಗಳನ್ನು ಜಾಗೃತಗೊಳಿಸುವಂತಹ ಶಿಕ್ಷಣವನ್ನು ನೀಡಬೇಕು. ಯುವಜನತೆ ಶುದ್ಧಾಂತಃಕರಣದಿಂದ ತಮ್ಮ ಸಾಂಸ್ಕೃತಿಕ ಪರಂಪರೆಯನ್ನು ರಕ್ಷಿಸುವುದು ಸಹ ಅವರ ಒಂದು ಹೊಣೆಯಾಗಿದೆ. ಮುಂದಿನ ಪೀಳಿಗೆಗೆ ಉತ್ತಮ ಭವಿಷ್ಯವನ್ನು ಕಲ್ಪಿಸಿ, ಅವರಿಗಾಗಿ ಉನ್ನತ ಆದರ್ಶಗಳನ್ನು ಬಿಟ್ಟು ಹೋಗುವುದು, ಉತ್ತಮ ಮಾರ್ಗದರ್ಶನ ನೀಡುವುದು ಇಂದಿನ ಪೀಳಿಗೆಯ ಕರ್ತವ್ಯ.

ಸಹಸ್ರಾರು ವರ್ಷಗಳ ಇತಿಹಾಸವನ್ನುಳ್ಳ ನಮ್ಮ ದೇಶದಲ್ಲಿ ಮೌಢ್ಯತೆ ಕಂಡು ಬಂದರೂ ಹಲವಾರು ಬಗೆಯಲ್ಲಿ ಮಾರ್ಗದರ್ಶಕವಾಗಿದೆ. ಇಂದಿನ ಮತ್ತು ಹಿಂದಿನ ವಿಚಾರಗಳೆರಡನ್ನು ವಿಲೀನಗೊಳಿಸಿ ಉತ್ತಮ ಆದರ್ಶ ತತ್ವಗಳನ್ನು ಪರಿಪಾಲಿಸಿಕೊಂಡು ನಡೆಯಬೇಕು. ಆಧುನಿಕ ಜಗತ್ತಿನ ನಾಗರೀಕತೆಯ ನಾಗಾಲೋಟದಲ್ಲಿ ಅದೆಷ್ಟು ಆದರ್ಶ ತತ್ವಗಳು ನುಚ್ಚುನೂರಾಗಿವೆಯೊ ?........... ನಾವು ಅನುಕರಣೆಯ ದಾಸ್ಯಕ್ಕೆ ಬಲಿಯಾಗಿ ನಮ್ಮ ಸಂಸ್ಕೃತಿಯನ್ನೇ ನಾಶಮಾಡುತ್ತಿದ್ದೇವೆ. ಇದು ಸಲ್ಲದು ನಾವು ನಮ್ಮದರ ಬಗ್ಗೆ ಅಭಿಮಾನ ತಾಳಬೇಕು. ಇಂದು ಸ್ವೇಚ್ಛಾಚಾರದಲ್ಲಿ ಮುಳುಗಿ ಅರ್ಥವಿಲ್ಲದ ಆದರ್ಶಗಳ ಹುಚ್ಚುಹೊಳೆಯಲ್ಲಿ ಕೊಚ್ಚಿ ಹೋಗುತ್ತಿರುವ ನಾವು ಎಚ್ಚೆತ್ತುಕೊಳ್ಳಬೇಕು ಆರ್ಥಿಕ ಪರಿಸ್ಥಿತಿ, ಹಣದುಬ್ಬರ ಇವುಗಳಿಂದ ಅಧಃಪತನಕ್ಕಿಳಿಯುತ್ತಿರುವ ನಮ್ಮ ಸಮಾಜವನ್ನು ಕಾಪಾಡಬೇಕಾಗಿದೆ. ಕೇವಲ ಉಂಡುಟ್ಟು ಬದುಕುವುದೇ ಜೀವನವಲ್ಲ. ಸಮಾಜವನ್ನು ಬೇರೊಂದು ರೀತಿಯಲ್ಲಿ ರೂಪಿಸಿ ಆದರ್ಶಸಮಾಜವನ್ನಾಗಿಸುವ ಕೆಚ್ಚು ನಮ್ಮಲ್ಲಿ ಬರಬೇಕು.

ನಾವು ಅಜ್ಞಾನದ ಅಧೀರತೆಯಿಂದ, ಸಂಕುಚಿತ ಮನೋಭಾವಗಳ ಬಂಧನದಿಂದ ಮುಕ್ತರಾಗಿ, ಧೀರ ಧೀಮಂತ ವ್ಯಕ್ತಿತ್ವವನ್ನು ಮೈಗೂಡಿಸಿಕೊಂಡು ಸಮಾಜೋದ್ಧಾರಕ ಕಾರ್ಯಗಳಲ್ಲಿ ಮನವಿರಿಸಬೇಕು. ಹೀಗೆ ಕರ್ತವ್ಯ ಪ್ರಜ್ಞೆಯನ್ನು ಮೂಡಿಸಿಕೊಂಡು ಜಾಗೃತಗೊಂಡಾಗ ಮಾತ್ರ ನಾವು ಗುರಿಸಾಧಿಸಲು ಸಾಧ್ಯ. —

## ಶಾಲೆಗೆ ಸಂದ ಗೌರವ

ರಾಷ್ಟ್ರೀಯ ಗ್ರಾಮೀಣ ವಿದ್ಯಾರ್ಥಿವೇತನ ಪಡೆಯಲು ಅರ್ಹರಾದ ವಿದ್ಯಾರ್ಥಿಗಳು ಪ್ರೌಢಶಿಕ್ಷಣ ಮಟ್ಟದಲ್ಲಿ ಸರಕಾರದಿಂದ ಅಂಗೀಕೃತ ಶಾಲೆಗಳಿಗೆ ಮಾತ್ರ ಸೇರಬೇಕಾದ ವ್ಯವಸ್ಥೆ ಇದ್ದು, ಅಂತಹ ಮನ್ನಣೆ ಪಡೆದ ಶಾಲೆಗಳ ಪಟ್ಟಿಗೆ ಹೊಸದಾಗಿ ಈ ಸಾಲಿನಿಂದ [ 1977–78 ] ಶ್ರೀಕ್ಷೇತ್ರದ ಸನಿವಾಸ ಪ್ರೌಢಶಾಲೆಯೂ ಸೇರಿರುವುದು ಹರ್ಷದಾಯಕ ಸಂಗತಿ. ಇನ್ನು ಮುಂದೆ ಪ್ರತಿಭಾವಂತ ವಿದಾರ್ಥಿಗಳು ಅಂತಹ ಶಾಲೆಯನ್ನರಸಿ ಬೇರೆಡೆ ಹೋಗಬೇಕಾಗಿಲ್ಲ, ಅಲ್ಲದೆ ಬೇರೆಡೆ ವ್ಯಾಸಂಗ ಮಾಡುತ್ತಿರುವ ಅರ್ಹ ವಿದ್ಯಾರ್ಥಿಗಳು ಈ ಕ್ಷೇತ್ರದ ಶಾಲೆಯ ಪ್ರವೇಶಾವಕಾಶ ಪಡೆಯಲೂ ಸಹಾಯಕವಾಗಿದೆ.

# ಗ್ರಂಥ ವಿಮರ್ಶೆ

—ಚನ್ನಪ ಎರೇಸೀಮ

**'ದೇಗುಲ ಜ್ಯೋತಿ'**

ಪುಟ XV 368 : ಪ್ರಕಾಶನ : ಕನಕಪುರ ದೇಗುಲಮಠ

ಬೆಲೆ : ಹತ್ತು ರೂಪಾಯಿ

ಸಂಗ್ರಹ ಯೋಗ್ಯ ಸ್ತುತ್ಯಾರ್ಹ ಕೃತಿ. ವಿಚಾರಪರಿಪ್ಲುತ ಗಂಭೀರ ಲೇಖನಗಳ ಸಂಗ್ರಹ; ಓದುಗರ ಮನಭಾವಗಳನ್ನು ಸೆರೆಗೈಯುವ ವೈವಿಧ್ಯಮಯ ಲೇಖನಗಳ ಮತ್ತು ಹಾಲು ಹಾಳೆಯಲ್ಲಿ ನೇತ್ರಾನಂದವಾಗುವಂತೆ ಮುದ್ರಣದ ಈ ಕೃತಿ ಇತಿಹಾಸ ಪ್ರಸಿದ್ಧ ಕನಕಪುರ ದೇಗುಲ ಮಠದ ಮತ್ತು ಅಘಟಿಕ ಘಟನಾವಿಶಿಷ್ಟರಾದ ಮಠಾಧಿಪತಿಗಳ ಸಮಗ್ರ ಚರಿತ್ರೆಯನ್ನು ಅವರು ಆಚರಿಸಿದ ಶಿವಾದ್ವೈತಸಿದ್ಧಾಂತ ರಹಸ್ಯಗಳನ್ನೂ ಒಡಲಲ್ಲಿ ಮೂಡಿಸಿಕೊಂಡು ನಿಂತಿರುವ ದೇಗುಲ ಜ್ಯೋತಿ ಹೆಸರಿಗೆ ತಕ್ಕ ಸತ್ವ ಭಾರದಿಂದ ಬಳುಕಿದೆಯೆಂದರೆ ತಪ್ಪಾಗಲಾರದು. ಲಿಂಗೈಕ್ಯ ನಿರ್ವಾಣಸ್ವಾಮಿಗಳವರು ಈ ಯುಗದ ಶ್ರೇಷ್ಠವರ್ಗದ ಶಿವಯೋಗಾಮಾರ್ಗಾನುಗಾಮಿಗಳಾಗಿದ್ದರು; ಪರಮ ದಾಸೋಹ ತಪೋಧನರೆನಿಸಿದ್ದರು. ಅವರ ಜೀವನದ ಅನೇಕ ರಹಸ್ಯಗಳನ್ನು ಅನೇಕ ಮುಖಗಳಿಂದ ಚಿತ್ರಿಸುವ ಪ್ರಯತ್ನವನ್ನು ಅನೇಕ ಅನುಭಾವಿಗಳು ಮಾಡಿದ್ದಾರೆ. ಅಂತೆಯೆ ಅವರ ಕರಕಂಜ ಸಂಜಾತರೂ, ಕರ್ಮಯೋಗದ ಮಹತ್ತು ಬೃಹತ್ತುಗಳನ್ನು ತನುವದಂಡಿಸಿ ಮನವ ಬಳಲಿಸಿ ಅರಿತ ಆಚರಿಸುತ್ತ ವರ್ತನೋಪದೇಶ ಸ್ವರೂಪರಾಗಿರುವವರೂ ಸದ್ಯದ ಮಠಾಧಿಪತಿಗಳೂ ಆದ ಶ್ರೀ ನಿ. ಪ್ರ. ಮಹಾಲಿಂಗಸ್ವಾಮಿಗಳವರ ಬಹುಮುಖದ ಸತ್ವಭರಿತ ಜೀವನ ಚಿತ್ರಣ ಈ ಕೃತಿಯ ಬೆಲೆಯನ್ನು ಅಧಿಕಗೊಳಿಸಿವೆ. ಹರದನ ಹಳ್ಳಿಯ ನಿರಂಜನ ಜಂಗಮ ಪರಂಪರೆಯವರ ಇತಿಹಾಸ ವೀರಶೈವೇತಿಹಾಸದಲ್ಲಿ ಮಹತ್ವದ ಘಟ್ಟ ಆ ಪರಂಪರೆಯವರು ಕರ್ನಾಟಕದ ಅನೇಕ ಮಠಮಾನ್ಯಗಳಿಗೆ ಕಾರಣೀಭೂತರು. ಪ್ರಭುದೇವರ ಪರಂಪರೆ ವಿಡಿದು ಬಂದ ಅವರಲ್ಲಿ ಅನೇಕ ಮಹಿಮಾಪುರುಷರು ಆಗಿಹೋದರು. ಅಂಥ ಮಹಿಮಾಪುರುಷರಲ್ಲಿ ಆದ್ಯ ನಿರ್ವಾಣಸ್ವಾಮಿಗಳೆಂಬ ಒಬ್ಬರು ಕಳೆದ ಆರು ಶತಮಾನಗಳ ಹಿಂದೆ 'ಕಾಣಿಕಾರನಹಳ್ಳಿ' ಎಂಬಲ್ಲಿ ಉಳಿದು ತಪೋನುಷ್ಠಾನ ನಿರತರಾಗಿ ಈಗಿನ ದೇಗುಲ ಮಠದ ಪರಂಪರೆಗೆ ಮೂಲಪುರುಷರಾಗಿದ್ದಾರೆಂಬುದನ್ನು ಸಾಧಾರಪೂರ್ವಕವಾಗಿ ನಿರೂಪಿಸಿರುವ ಈ ಕೃತಿಯಲ್ಲಿ ದೇಗುಲ ಮಠದ ಐತಿಹಾಸಿಕ ಘಟನಾವಳಿಗಳ ಸ್ಪಷ್ಟ ಚಿತ್ರಣವಿದೆ; ಶಾಸನಗಳ ಆಧಾರ ವಿಡಿದು ಈ ಚರಿತ್ರೆಯನ್ನು ನಿರೂಪಿಸುವಲ್ಲಿ ಲೇಖಕರು ಕೃತಕೃತ್ಯರಾಗಿದ್ದಾರೆ.'

ಕ್ರಿ. ಶ. ೧೬೬೭ ರಿಂದ ಮೈಸೂರು ಆಳರಸರಿಗೂ ಶ್ರೀ ಮಠಕ್ಕೂ ಇದ್ದ ಸಂಬಂಧಕ್ಕೆ ಇಲ್ಲಿನ ಶಾಸನ ಸಾಹಿತ್ಯವನ್ನು ಪ್ರಕಟಿಸಿದುದು ಐತಿಹಾಸಿಕ ಸತ್ಯಕ್ಕೆ ಹಿಡಿದ ಕನ್ನಡಿಗಳಂತಿವೆ. ಒಂದು ಕಡೆಯಲ್ಲಿ ಹೀಗೆ ಮಠದ ಚರಿತ್ರೆಗೆ ಅಭ್ಯಾಸಪೂರ್ಣ ವಿಷಯ ಬಾಹುಳ್ಯ ವೊದಗಿಸಿರುವ ಈ ಗ್ರಂಥ ಇನ್ನೊಂದು ಕಡೆಗೆ ವೀರಶೈವ ಮಹಿಮಾಪುರುಷರ ಅವರ ಸಿದ್ಧ ಸಾಧನೆಗಳ, ಸಿದ್ಧಾಂತ ತತ್ವಗಳ, ಕಾರ್ಯಗಳ ಪರಿಚಯ ಮಾಡಿಕೊಡುವ ಅನೇಕ ವಿದ್ವತ್ಪೂರ್ಣ ಲೇಖನಗಳಿಂದ ಬಾಗಿ ನಿಂತಿರುವ ಈ ಕೃತಿಯಲ್ಲಿ ಅಲ್ಲಲ್ಲಿ ಮುದ್ರಣ ದೋಷಗಳು ಕಂಡುಬಂದರೂ ಈ ಕಾಲದಲ್ಲಿ ಅಷ್ಟೂ ದೋಷ ಉಳಿಯದಿದ್ದರೆ ಹೇಗೆ ? ಎಂದುಕೊಂಡು ಸುಮ್ಮನಾಗಬೇಕಾಗಿದೆ. ಗ್ರಂಥದಲ್ಲಿ ಮೂರು ವರ್ಣ ಚಿತ್ರಗಳು ಗ್ರಂಥಕ್ಕೆ ಹೆಚ್ಚಿನ ಶೋಭೆ ತಂದಿವೆ. ಇಂಥ ಉತ್ತಮ ಕೃತಿಯನ್ನು ಹೊರತರುವಲ್ಲಿ ಸಂಪಾದನೆಯ ಹೊಣೆ ಹೊತ್ತು ಶ್ರಮಿಸಿದ ಶ್ರೀ ಎನ್. ಮಹಾದೇವಪ್ಪ ಮತ್ತು ಬಿ. ನಂಜುಂಡಪ್ಪನವರಿಗೆ ಓದುಗರು ತಮ್ಮ ಧನ್ಯವಾದಗಳನ್ನರ್ಪಿಸಲೇ ಬೇಕು. ಉದಾರವಾಗಿ ಧನ ವಿನಿಯೋಗಿಸಲು ತ್ರಿವಿಧ ದಾಸೋಹಿ ಪೂಜ್ಯ ಮಹಾಲಿಂಗಸ್ವಾಮಿಗಳು ಮನಸ್ಸುಮಾಡದಿದ್ದರೆ ಇಂಥ ಉತ್ತಮ ಕೃತಿ ಹೊರಬರಲು ಸಾಧ್ಯವಿರಲಿಲ್ಲವಾಗಿ ಓದುಗರೆಲ್ಲರ ಪ್ರಣಾಮಗಳೂ ಅವರಿಗೆ ಸಲ್ಲಲೇಬೇಕು. —

[ 7 ನೇ ಪುಟದಿಂದ ]

" ಬಸವೇಶಂ ಶರಣಾಗ್ರಣಿ ಮಣಿ ।
ಬಸವೇಶಂ ತ್ರೈಜಗಧಣಿಗುಣಿ ।
ಬಸವೇಶಂ ಪರುಷದ ಕಣಿ ನಿಜ ।
ಬಸವೇಶಂ ಗಜ ಹರಿಯಾರಿಣಿ ।
ಝಣ ಝೇಂಕೃತ ಪ್ರಿಯ ಗೌರಿ ॥
ಬಸವೇಶಂ ಮುಕ್ತಿಯ ಕೋಶಂ ।
ಬಸವೇಶಂ ಭಕ್ತಿವಿಲಾಸಂ ।
ಬಸವೇಶಂ ಪಾಪವಿನಾಶಂ ।
ಬಸವೇಶಂ ಜ್ಞಾನದಿನೇಶಂ ।
ಮತ್ಪ್ರಾಣಂ ನಿಜಗೌರೀ ॥
ಬಸವೇಶಂ ಪ್ರಣವಾಕಾರಂ ।
ಬಸವೇಶಂ ಶಿವಮತ ಸಾರಂ ।
ಬಸವೇಶಂ ದುರ್ಜನ ದೂರಂ ।
ಬಸವೇಶಂ ಶ್ರೀ ಮಹಂತೇಶಂ ।
ಸತ್ಯಂ ತವ ಶೃತಗೌರೀ ॥

ಇಲ್ಲಿ ಅವಿನಾಭಾವ ಸಂಬಂಧವನ್ನು ಗುರುತಿಸಬಹುದು. 'ಬಸವಾ ಶಿವನೆ; ಶಿವನೇ ಬಸವ ॥ ಎಂಬಂತೆ ಶ್ರೀ ಮಹಾಂತೇಶನೇ ಬಸವೇಶ' ಎಂಬ ಸಮನ್ವಯ ಸುಂದರ ಭಾವ ಮೇಲಣ ಸ್ತೋತ್ರ ಪದ್ಯಗಳಲ್ಲಿ ಸೂರ್ಯ ಪ್ರಕಾಶದಷ್ಟು ಸ್ಪಷ್ಟವಾಗಿ ಮೂಡಿ ಬಂದಿದೆ. ಅವರ ಅಂತಃಕರಣದಿಂದ ಒಡಮೂಡಿದ ಕೆಳಗಿನ ಪದ್ಯವಂತೂ ಈಗಾಗಲೇ ಜನಮನವನ್ನು ಮುಟ್ಟಿದೆ; ತಟ್ಟಿದೆ.

" ಸಂಸಾರದೊಳಗೆ ಸದ್ಗತಿಯುಂಟು ಕೇಳ್ ಮಗನೆ
ಬಸವಾದಿ ಪ್ರಮಥರಿಗೇನಿದ್ದಿಲ್ಲವೇ ॥
ಸಂಸಾರ ಹಿಡಿದು ಸನ್ಮಾರ್ಗದಲಿ ನಡೆವರಗೆ
ಕುಶಲ ಶಂಕರ ತಾನೆ ಮೋಕ್ಷವನು ಕೊಡುವ ॥ "

ಬಾಲಲೀಲಾ ಮಹಾಂತ ಶಿವಯೋಗಿಗಳನ್ನು ರೂಪಿಸಿದ ಮಹಾಶಕ್ತಿಗಳೇ ಇವು ಎಂಬುದನ್ನು ಅವರೇ ಹಾಡಿ ಕೊಂಡಿರುವ ಪಾಡಿ ಕೊಂಡಿರುವ ಪದ್ಯಗಳಿಂದ ಮನಗಾಣಬಹುದು.

" ಬಸವನೆನ್ನಯ ಸ್ಥೂಲ ತನುವಿಷ್ಟವಾದನು ।
ಕೇಳು ಸಖಿಯೇ ।
ಬಸವಚೆನ್ನನೆಯ ಸೂಕ್ಷ್ಮತನು ಪ್ರಾಣವಾದನು ।
ಕೇಳು ಸಖಿಯೆ ।
ಬಸವ ಅಲ್ಲಮ ಕಾರಣಾಂಗಭಾವವಾದನು ।
ಕೇಳು ಸಖಿಯೆ ।
ಕಸವ ಕಳೆದು ಲೋಕದೈವತವಾದರು ।
ಕೇಳು ಸಖಿಯೆ ।

ಮೇಲಣ ಸೂಕ್ತಿ ಸುಧಾಮೃತದಲ್ಲಿ ಬಸವಣ್ಣನವರ ಬಗೆಗೆ ತಮಗಿದ್ದ ಉತ್ಕಟವಾದ ಭಕ್ತಿಯನ್ನು ಉಕ್ಕೇರುವಂತೆ ಹರಿಸಿದ್ದಾರೆ.

" ಬಸವತ್ರಯಾತ್ಮಕ ತ್ರೈಸಮಯ
ಮೂಲಚಿತ್ಕಳೋದ್ಭವ ಶಿವ
ಸಮಯ ಶಿರು ಮಹಾಂತಲಿಂಗ ಸ್ವಾಮಿನ್
ಬಹುಪರಾಕ್ "

ಎಂಬ ಘೋಷಣೆ ಬಸವಾದಿ ಪ್ರಮಥರ ಕೀರ್ತಿ ದುಂದುಬಿಯನ್ನೇ ಮೊಳಗಿಸುತ್ತದೆ.

ಘನಮಠ ಶಿವಯೋಗಿಗಳು, ಚಿತ್ತರಗಿ ಮಹಾಂತ ಶಿವಯೋಗಿಗಳು, ಅಥಣಿಯ ಮುರುಘೇಂದ್ರ ಶಿವಯೋಗಿಗಳು ಬಸವಣ್ಣನವರ ವಚನಗಳ ಕಟ್ಟನ್ನು ಸದಾ ತಮ್ಮ ಬಳಿಯಲ್ಲಿಟ್ಟುಕೊಂಡು ಪ್ರತಿ ದಿವಸ ತಪ್ಪದೇ ಪಠನ ಮಾಡುತ್ತಿದ್ದರು. ಅವುಗಳಿಗೆ ಅಪ್ಪಗಳ ವಚನಗಳೆಂದು ಅತ್ಯಂತ ಪೂಜ್ಯ ಭಾವನೆಯಿಂದ ಕರೆಯುತ್ತಿದ್ದರು. ಈ ಸಾಲಿನಲ್ಲಿ ಬಾಲಲೀಲಾ ಮಹಾಂತ ಶಿವಯೋಗಿಗಳು ಸೇರಿದ್ದಾರೆಂಬುದು ಮೇಲಣ ವಿವೇಚನೆಯಿಂದ ವಿದಿತವಾಗುತ್ತದೆ. ★

---

[ 11 ನೇ ಪುಟದಿಂದ ]

ಬೇಕು. ಮಾತೆಯವರು ಮೃತರಾಗಿಲ್ಲ, ದೇಹಾಂತರ ಹೊಂದಿದ್ದಾರೆ. ಅವರು ತಮಗೆ ಮುಕ್ತವಾಗಿರುವ ತಮ್ಮ ಸಾಧಕರ ಮೂಲಕ ಕಾರ್ಯ ಮಾಡುವರು. ಇನ್ನು ಮೇಲೆ ಮಾತೆಯವರ ಕಾರ್ಯವು ಆಶ್ರಮಕ್ಕಾಗಲಿ, ಆರೋವಿಲ್ ಗಾಗಲಿ ಸೀಮಿತವಾಗಿರುವದಿಲ್ಲ. ಜಗತ್ತೇ ಇನ್ನು ಮೇಲೆ ಅವರ ಆಶ್ರಮ. ಮಾತೆಯವರು ನಿತ್ಯರಾಗಿದ್ದಾರೆ, ಶಾಶ್ವತರಾಗಿದ್ದಾರೆ. ಅವರು ಇನ್ನು ಮುಂದೆ, ಈ ಮುಂಚೆಯೂ ಕೂಡ ಪೃಥ್ವಿ ಸ್ತರಕ್ಕೆ ಮಾತ್ರ ಅಂಟಿಕೊಂಡಿರುವುದಿಲ್ಲ, ಅಂಟಿಕೊಂಡಿರಲಿಲ್ಲ. ಅವರ ಜೀವನಕ್ಕೆ, ಕಾವ್ಯರಂಗಕ್ಕೆ ಯಾವಾಗಲೂ ಹೊಸದೊಂದು ಆಯಾಮವಿದ್ದಿತು.

ಇದು ಮಾತೆಯವರ ಮಹಾಸಮಾಧಿಯ ಕಥೆ. ಶ್ರದ್ಧಾವಂತ ಸಾಧಕರಿಗೆ ಇದು ಅತಿರಂಜಿತವೆನಿಸಲಾರದು.

## "ಸಿದ್ಧಗಂಗಾ" ಚಿರಾಯುವಾಗಲೆಂದು

### ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

285 ಸಿ. ಸಿ. ಕಲ್ಲಪ್ಪ, ಶಿಕ್ಷಕರು,
ಪುರ, ಗುಬ್ಬಿ ತಾ||

286 ಹೆಚ್. ಎಂ. ಜಯಣ್ಣ, ಶಿಕ್ಷಕರು,
ಹರದಗೆರೆ, ಗುಬ್ಬಿ ತಾ||

287 ಎನ್. ಕೆ. ಬಸವಯ್ಯ ಶಿಕ್ಷಕರು,
ನಿಟ್ಟೂರು. ಗುಬ್ಬಿ ತಾ

288 ಪಿ. ಸಿ. ಶಿವಣ್ಣ, ಶಿಕ್ಷಕರು.
ಪುರ, ಗುಬ್ಬಿ ತಾ||

289 ಶ್ರೀಮತಿ ಕೆ. ಎಸ್. ಶಾರದಮ್ಮ, ಶಿಕ್ಷಕಿ,
ನಿಟ್ಟೂರು. ಗುಬ್ಬಿ ತಾ||

290 ಎಂ. ಡಿ. ಲಿಂಗಪ್ಪ, ಶಿಕ್ಷಕರು,
ಎಂ. ಎನ್. ಕೋಟೆ, ಗುಬ್ಬಿ ತಾ||

291 ಟಿ. ಸಿ. ಶಿವಲಿಂಗಪ್ಪ, ಶಿಕ್ಷಕರು,
ತ್ಯಾಗಟೂರು, ಗುಬ್ಬಿ ತಾ||

292 ಎಂ ಆರ್ ಚಂದ್ರಶೆಖರಯ್ಯ, ಶಿಕ್ಷಕರು.
ಹೆಚ್ ಎನ್ ಹಳ್ಳಿ, ಗುಬ್ಬಿ ತಾ||

293 ಟಿ.ಕೆ. ನಂಜಪ್ಪ, ಶಿಕ್ಷಕರು,
ತ್ಯಾಗಟೂರು, ಗುಬ್ಬಿ ತಾ||

294 ಎನ್. ಜೆ. ಅಡವೀಸಿದ್ಧಯ್ಯ, ಶಿಕ್ಷಕರು,
ನಿಟ್ಟೂರು, ಗುಬ್ಬಿ ತಾ||

295 ಎನ್. ಶಿವಣ್ಣ, ಶಿಕ್ಷಕರು,
ಹೆಸರಹಳ್ಳಿ, ಗುಬ್ಬಿ ತಾ||

296 ಎಲ್. ಸಿದ್ಧಲಿಂಗಪ್ಪ, ಶಿಕ್ಷಕರು,
ಗಣೇಶ ಗುಡಿ ಬೀದಿ,ಗುಬ್ಬಿ.

297 ಕೆ.ಶಿವಣ್ಣ, ಶಿಕ್ಷಕರು,
ಗೋಪಾಲಪುರ, ಗುಬ್ಬಿ ತಾ||

298 ಜಿ.ಎಸ್. ಸಿದ್ಧನಂಜಪ್ಪ, ಶಿಕ್ಷಕರು,
ಗಂಗಸಂದ್ರ. ಗುಬ್ಬಿ ತಾ||

299 ಎಲ್. ಚಂದ್ರಶೇಖರಯ್ಯ, ಶಿಕ್ಷಕರು
ತೋಟಸಾಗರ, ಗುಬ್ಬಿ ತಾ||

300 ಜಿ. ಬಸವಯ್ಯ ಶಿಕ್ಷಕರು,
ಬಿ. ಹೆಚ್. ರೋಡ್, ಗುಬ್ಬಿ.

301 ಎಸ್. ಚಂದ್ರಪ್ಪ, ಶಿಕ್ಷಕರು,
ಗಲಗ, ಗುಬ್ಬಿ ತಾ||

302 ಟಿ. ಎನ್. ರಾಮಕೃಷ್ಣಯ್ಯ,
ಬೆಲದರ, ತುಮಕೂರು ತಾ||

303 ಎಂ. ಬಸವಯ್ಯ, ಶಿಕ್ಷಕರು,
ಗುಬ್ಬಿ ಹೊಸಹಳ್ಳಿ, ಗುಬ್ಬಿ ತಾ||

304 ಹೆಚ್. ಜಿ. ರಾಜಣ್ಣ, ಶಿಕ್ಷಕರು,
ಹಬ್ಬತನಹಳ್ಳಿ, ತುಮಕೂರು ತಾ||

(ಮುಂದುವರೆಯುವುದು)

"SIDDAGANGA" Monthly, Sree Siddaganga Mutt. KRN Q-9
Registered with the Registrar of News papers for India under No. 17139/69

ಈ ಶುಭ ಸಂದರ್ಭದಲ್ಲಿ ನಮ್ಮ ಎಲ್ಲಾ ಗ್ರಾಹಕರಿಗೆ ಮತ್ತು
ಪ್ರೋತ್ಸಾಹಿಗಳಿಗೆ ಹೃತ್ಪೂರ್ವಕವಾದ ಧನ್ಯವಾದಗಳು.

# ಕೆಂಚಾಂಬ ಲಾಡ್ಜ್

ನಂ 197, ಸುಬೇದಾರ್ ಛತ್ರಂ ರಸ್ತೆ, (ಕಪಾಲಿ ಸಿನೆಮಾ ಪಕ್ಕದಲ್ಲಿ)
ಗಾಂಧಿನಗರ — ಬೆಂಗಳೂರು-9.

ಫೋನ್ : 27082. ಗ್ರಾಂ KENCHMLODG




- ಸೌಜನ್ಯಪೂರ್ಣವಾದ ಸೇವೆ
- ಶುಚಿ ರುಚಿಯಾದ ಸಸ್ಯಾಹಾರ
- ಬಸ್ ಮತ್ತು ರೈಲು ನಿಲ್ದಾಣಗಳಿಗೆ ಅತಿ ಸಮೀಪ
- ನಗರದ ಕೇಂದ್ರ ವಾಣಿಜ್ಯ ಹಾಗೂ ಮನರಂಜನೀಯ ಸ್ಥಳದಲ್ಲಿದೆ
- ವಿಶಾಲವಾದ ಕೊಠಡಿಗಳು (ಬಾತ್ ರೂಂ ಸಹಿತ)
- ಶಾಂತ ವಾತಾವರಣ: ಉತ್ತಮ ಗಾಳಿ, ಬೆಳಕು
- ಕಾರ್ ಪಾರ್ಕಿಂಗ್ ಕಡಿಮೆ ದರಗಳು ಇತ್ಯಾದಿ



... ಮುದ್ರಣಾಲಯ, ಶ್ರೀ ಸಿದ್ಧಗಂಗಾಮಠ.